# ದಲಿತ ಸಾಹಿತ್ಯ

ಕನ್ನಡ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ನಿಬಂಧ

ಸಂಶೋಧಕರು
ಬಸವರಾಜು

ಮಾರ್ಗದರ್ಶಕರು
ಪ್ರೊ. ಪಿ.ಕೆ. ರಾಜಶೇಖರ





ಕರ್ನಾಟಕ ಸಂಘ (ರಿ), ಮಂಡ್ಯ
ಎಂ.ಎಲ್. ಶ್ರೀಕಂಠೇಗೌಡರ ಸಂಶೋಧನಾ ಕೇಂದ್ರ,
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

೨೦೦೭ - ೨೦೦೮

# ದಲಿತ ಸಾಹಿತ್ಯ

ಕನ್ನಡ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ನಿಬಂಧ


ಸಂಶೋಧಕರು

**ಬಸವರಾಜು**

ಮಾರ್ಗದರ್ಶಕರು

**ಪ್ರೊ. ಪಿ.ಕೆ. ರಾಜಶೇಖರ**









ಕರ್ನಾಟಕ ಸಂಘ (ರಿ), ಮಂಡ್ಯ
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

೨೦೦೭ - ೨೦೦೮

# ಮಾರ್ಗದರ್ಶಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಕನ್ನಡ ಎಂ.ಫಿಲ್ ಪದವಿಯ ವಿದ್ಯಾರ್ಥಿಯಾದ KSM/00209 ಅವರು ನನ್ನ ಮಾರ್ಗದರ್ಶನದಲ್ಲಿ **'ದಲಿತ ಸಾಹಿತ್ಯ'** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾನಿಲಯಕ್ಕೆ ಅಥವಾ ಬೇರೆ ಯಾವುದೇ ವಿದ್ಯಾವಿದ್ಯಾನಿಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೧೦-೦೯-೨೦೦೮
ಸ್ಥಳ : ಮೈಸೂರು

ಸಿ. ಪಿ. ರಾಜಶೇಖರ
ಮಾರ್ಗದರ್ಶಕರು
ವಿಶ್ರಾಂತ ಕನ್ನಡ ಪ್ರಾಧ್ಯಾಪಕರು
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು.

ಡಾ. ರಾಜಶೇಖರ
ಪ್ರಾಧ್ಯಾಪಕರು
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ
ಮೈಸೂರು-೫೭೦೦೦೬

# ಅಭ್ಯರ್ಥಿಯ ಘೋಷಣಾ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ೨೦೦೭ - ೨೦೦೮ನೇ ಸಾಲಿನ ಕನ್ನಡ ಎಂ.ಫಿಲ್. ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **'ದಲಿತ ಸಾಹಿತ್ಯ'** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಪ್ರೊ. ಪಿ.ಕೆ. ರಾಜಶೇಖರ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ ನಿಬಂಧದ ಅಧ್ಯಯನಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತ ಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಅಭ್ಯರ್ಥಿಯ ಸಹಿ

(ಬಸವರಾಜು)

ದಿನಾಂಕ : ೧೦-೦೯-೨೦೦೮
ಸ್ಥಳ : ಮಂಡ್ಯ

# ಪರಿವಿಡಿ

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಸುಮಾರು ೧೫೦೦ ವರ್ಷಗಳ ಇತಿಹಾಸವಿರುವ ನಮ್ಮ ಕನ್ನಡ ಸಾಹಿತ್ಯದಲ್ಲಿ ಆದಿಕವಿ ಪಂಪನಿಂದ ಹಿಡಿದು ಇಲ್ಲಿಯವರೆಗೆ ಬಂದ ಅನೇಕಾನೇಕ ಕವಿಗಳು, ಲೇಖಕರು ಮತ್ತು ನಾಟಕಕಾರರು ಸಾಹಿತ್ಯ ಕೃಷಿಯಲ್ಲಿ ತಮ್ಮದೇ ಆದ ನಿಲುವಿನ ಚಾಪುಮೂಡಿಸಿಕೊಳ್ಳುತ್ತಾ, ಬಂದಿರುವುದನ್ನು ಕಾಣಬಹುದು.

ಆದಿಕವಿ ಪಂಪನ ಕಾಲದ ಸಾಹಿತ್ಯವನ್ನು ಅವಲೋಕಿಸಿದರೆ ಅಲ್ಲಿ ರಾಜಾಶ್ರಯ ಹಾಗೂ ಧರ್ಮಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಿ ರಾಜನ ಓಲೈಕೆ ಮತ್ತು ಧರ್ಮದ ಪ್ರಚಾರ ಮತ್ತು ಅದರ ಕಟ್ಟುಸಿಟ್ಟಾದ ಆಚರಣೆಯನ್ನು ಪ್ರತಿಪಾದಿಸುವ ಸಾಹಿತ್ಯ ರಚನೆಯಾಗಿದೆ. ತದನಂತರ ಬಂದ ವಚನ ಯುಗದಲ್ಲಿ ವಚನಕಾರರು 'ಕಾಯಕವೇ ಕೈಲಾಸ' ಎಂಬ ನಿಯಮವನ್ನು ಪ್ರತಿಪಾದಿಸುತ್ತಾ ಸಮಾಜದ ಕಳಂಕಿತ ಮೌಢ್ಯಯುತ ಜಾತಿ, ಧರ್ಮ, ಲಿಂಗಭೇದ ನೀತಿ ಮುಂತಾದಗಳನ್ನು ಒರೆಗೆ ಹಚ್ಚುವ ಮುಖಾಂತರ ಸಮಾಜವನ್ನು ಶುದ್ಧೀಕರಿಸಲು ಪ್ರಯತ್ನಿಸಿದುದನ್ನು ತಮ್ಮ ವಚನಗಳಲ್ಲಿ ಸರ್ವಜನರಿಗೂ ಸಾರಿ ಹೇಳುತ್ತಾ, ತಾವೂ ಅದನ್ನು ಪ್ರತಿಪಾದಿಸುತ್ತಾ ಬಂದರು. ಆ ನಂತರ ಬಂದ ಹರಿಹರ ರಾಘವಾಂಕಾದಿ ಕವಿಗಳು ರಾಜಾಶ್ರಯ ಧಿಕ್ಕರಿಸಿ ಸಾಹಿತ್ಯ ರಚನೆ ಮಾಡಿದವರು. ಅಂತಯೇ ಹೊಸ ಗನ್ನಡದಲ್ಲಿ ನವೋದಯ ಪ್ರಗತಿಶೀಲ, ನವ್ಯ, ಬಂಡಾಯ ಮತ್ತು ವಾಪ್ತಿ, ದಲಿತ, ಮುಸ್ಲಿಂ, ಸ್ತ್ರೀ ಸಂವೇಧನೆಯ ಸಾಹಿತ್ಯ ಇನ್ನು ಮುಂತಾದವು ಬಂದವನ್ನು ಕಾಣುತ್ತೇವೆ. ಈ ಎಲ್ಲಾ ಸಾಹಿತ್ಯ ಘಟ್ಟಗಳು ಕನ್ನಡ ಸಾಹಿತ್ಯದಲ್ಲಿ ಅಂದಿನ ಸಾಮಾಜಿಕ ಬದುಕಿನ ತೊಡಗಳನ್ನು ಒರೆಗೆ ಹಚ್ಚುವಲ್ಲಿ ಮುಂದಾದವು. ನವೋದಯ ಸಾಹಿತ್ಯ ಪ್ರಕೃತಿಯ ಆರಾಧನೆಯ ಜೊತೆಗೆ ಆ ಪ್ರಕೃತಿಯಲ್ಲಿನ ಮನುಷ್ಯನ ಸಾಮಾಜಿಕ ಬದುಕನ್ನು ನೈಜವಾಗಿ ತಿಳಿಸಿಕೊಡುತ್ತಾ, ಪ್ರಕೃತಿ ಮತ್ತು ಮನುಷ್ಯನ ನಡುವೆ ಭಾವಾನಾತ್ಮಕ ಸಂಬಂಧವನ್ನು ಬೆಸೆಯುವಲ್ಲಿ ಯಶಸ್ವಿಯಾಗಿದೆ, ಪ್ರಗತಿಶೀಲ ಸಾಹಿತ್ಯವು ಮಾನವ ಸಮಾಜದಲ್ಲಿ ಬದುಕಬೇಕಾದರೆ ಬೇಕಾಗುವ ಅನಿವಾರ್ಯತೆಗಳು, ಅದನ್ನು ಪಡೆಯಲು ನಡೆಸಬೇಕಾದ ಹೋರಾಟ, ಸ್ವತಂತ್ರ್ಯದ ಅಗತ್ಯತೆ, ಮುಂತಾದುಗಳನ್ನು ಚಿತ್ರಿಸುತ್ತದೆ. ಆದರೆ ನವ್ಯ ಸಾಹಿತ್ಯದಲ್ಲಿ ಪ್ರಕೃತಿ ಗೌಣವಾಗಿ ಮನುಷ್ಯ ಬದುಕು ಪ್ರಧಾನವಾಗುತ್ತದೆ ಮತ್ತು ಆ ಮೂಲಕ ಸಮಾಜದಲ್ಲಿನ ಮಾನವೀಯ ಮೌಲ್ಯಗಳನ್ನು ಎಳೆ - ಎಳೆಯಾಗಿ ಚಿತ್ರಿಸಿ ನವೋದಯದ ಭಾವಾನಾತ್ಮಕತೆಯನ್ನು ಅಲ್ಲಗೆಳೆದು ಬೌದ್ಧಿಕವಾದ ಜೀವಂತ ಬದುಕನ್ನು ತಿಳಿಸುತ್ತದೆ. ಇನ್ನು ಬಂಡಾಯ-ದಲಿತ, ಮುಸ್ಲಿ ಮತ್ತು ಸ್ತ್ರೀಸಂವೇಧನಾ ಸಾಹಿತ್ಯಗಳು ಸಮಾಜದ ವರ್ಗೀಕೃತ ಜಾತಿ ವ್ಯವಸ್ಥೆಯನ್ನು ವಿರೋಧಿಸುವಲ್ಲಿ, ಆ ಮುಖಾಂತರ ಸಾಮಾಜಿಕ ಮೌಲ್ಯಗಳನ್ನು ಪುನರ್ ಪರಿಶೀಲಿಸುವಲ್ಲಿ ಮುಂದಾಗಿರುವುದು ಕಂಡು ಬರುತ್ತದೆ. ಸಮಾಜದ ಒಪ್ಪಿತ ವ್ಯವಸ್ಥೆಯಂತೆ ವರ್ಗೀಕೃತ ಜಾತಿ, ಶ್ರೇಣಿ ವ್ಯವಸ್ಥೆಯು ಸಮುದಾಯದ ಜನರನ್ನು ಸಮನಾಂತರಾಗಿ ಕಾಣದೆ ತುಚ್ಛವಾಗಿ ಕಾಣುವುದು ಮೇಲ್ವರ್ಗದ ಶೋಷಣೆಯ ಪ್ರತೀಕವಾಗಿದೆ. ಇದಕ್ಕೆ ಕಾರಣ ಸಮಾಜದಲ್ಲಿರುವ ಜಾತಿಯ ಶ್ರೇಣಿಕರಣ ಪ್ರತಿ ಮಾನವರಲ್ಲಿ ಸಮಾನತೆ ತರಲು ಸಾಧ್ಯವಾಗದೆ ಲಂಬವಾಗಿ ಒಬೊಬ್ಬೊರ ಮೇಲೊಬ್ಬರು ನಿಂತು ವ್ಯಕ್ತಿಯಿಂದ ತಮ್ಮ ತಮ್ಮ ಆದಿಪತ್ಯವನ್ನು ಸ್ಥಾಪಿಸುತ್ತಾ ಸಾಗಿರುವುದೇ ಆಗಿದೆ. ಹೀಗೆ ವರ್ಗೀಕರಿಸಿಕೊಂಡ ಜಾತಿ - ಶ್ರೇಣಿ ವ್ಯವಸ್ಥೆಯಲ್ಲಿ

ಮೇಲ್ ಸ್ಥರದಲ್ಲಿ ಪುರೋಹಿತ ವರ್ಗ ನಿಂತುಕೊಂಡು ಕೆಳಸ್ಥರದಲ್ಲಿ ಅಸ್ಪೃಶ್ಯವರ್ಗವನ್ನು ಇಟ್ಟಿರುವುದನ್ನು ಕಂಡು ಬರುತ್ತದೆ ಹಾಗೆ ವೃತ್ತಿಯಲ್ಲಿಯೂ ಕೂಡ ಪುರೋಹಿತಶಾಹಿಯೇ ಪೂಜಾನೀಯ ಸ್ಥಾನದಲ್ಲಿ ನಿಂತು ತಮ್ಮ ಅಧೀನದಲ್ಲಿ ಬರುವ ಎಲ್ಲಾ ವರ್ಗಗಳ ಮೇಲೂ ತಾನು ರೂಪಿಸಿದ ನೀತಿ ನಿಯಮಗಳನ್ನು ಹೇರಿತು. ಹಾಗೆಯೇ ಎಲ್ಲಾ ಸೇವೆಗಳು ತಮಗೆ ಕಾನೂನು ನಿಯಮದಂತೆ ಎಂದು ತಿಳಿದು ಅವುಗಳನ್ನು ಪಾಲಿಸಲೇಬೇಕೆಂಬುವ ಅಸಹಾಯಕ ಮನೋಭಾವನೆಯನ್ನು ಕೆಳಸ್ತರದ ಜನಾಂಗಗಳಲ್ಲಿ ಬೆಳೆಯುವಂತೆ ಮಾಡಿತು. ಇದೆಲ್ಲಾ ಒಂದು ಹಂತದವರೆಗೆ ಮುಂದುವರೆದು, ಯಾವಾಗ ಭಾರತ ವಸಾಹತುಸಾಹಿ ಆಳ್ವಿಕೆಗೆ ಒಳಪಟ್ಟು ಆಂಗ್ಲರ ಆಗಮನದಿಂದ ಮತ್ತು ಆಡಳಿತದಿಂದ ಹಂತ - ಹಂತವಾಗಿ ಎಲ್ಲ ವರ್ಗದವರಿಗೆ ಅಕ್ಷರ ಸಿಂಚನವಾಗುತ್ತಾ ಶೂದ್ರರು ಹಾಗೂ ಅಸ್ಪೃಶ್ಯರು ಕಲಿತು ತಮ್ಮ ಪರಂಪರೆಯನ್ನು ಅರಿತು ಅದನ್ನು ಎದುರಿಸುವಲ್ಲಿ ಯಶಸ್ವಿಯಾದರು. ಹೀಗೆ ಸ್ವಾತಂತ್ರ್ಯೋತ್ತರದಲ್ಲಿ ಅನೇಕ ಸಂಘಟನೆಗಳು, ಚಳವಳಿಗಳು ಮುಂತಾದವುಗಳ ಮೂಲಕ ಅನಿವಾರ್ಯವಾಗಿ ಪರಂಪರೆಯನ್ನು ಹೆದರಿಸುವ ಮತ್ತು ಪುರೋಹಿತ ಶಾಹಿ ಮತ್ತು ಶೋಷಣೆ ಮಾಡುವ ವರ್ಗಗಳ ಎದುರು ತಮ್ಮ ವರ್ಗದ ಅಸ್ತಿತ್ವವನ್ನು ಮಾನವೀಯ ಮೌಲ್ಯಗಳ ನೆಲೆಯಲ್ಲಿ ಕಾಪಾಡಲು ಅನೇಕ ದಲಿತ ಸಾಹಿತಿಗಳು ಮುಂದಾದರು.

## ಅಧ್ಯಯನದ ಉದ್ದೇಶ :

ನವ್ಯ ಪರಂಪರೆಯು ತನ್ನ ಅಭಿವ್ಯಕ್ತಿಯ ಜಡ ಸ್ಥಿತಿಯಲ್ಲಿದ್ದಾಗ ಉಗಮಗೊಂಡ ದಲಿತ ಸಾಹಿತ್ಯದ ಆರಂಭದ ಕಾಲಕ್ಕೆ ಭಾರತದಾದ್ಯಂತ ವ್ಯಾಪಿಸಿದ್ದ ಕಾರ್ಲ್ ಮಾರ್ಕ್ಸ್, ಅಂಬೇಡ್ಕರ್, ಗಾಂಧಿ ಮತ್ತು ಲೋಹಿಯಾರವರ ವಿಚಾರ ಧಾರೆಗಳು ಸಾಹಿತಿಗಳ ಮೇಲೆ ಪ್ರಭಾವ ಬೀರಲು ಸಾಕಷ್ಟು ಸಮಯ ಹಿಡಿಯಲಿಲ್ಲ. ಆ ಸಂದರ್ಭದಲ್ಲಿ ಅನೇಕ ಸಾಹಿತಿಗಳು ಅವರ ವಿಚಾರ ಧಾರೆಗಳಿಂದ ಪ್ರೇರಣೆ ಪಡೆದರು. ಅದರಲ್ಲೂ ಭಾರತೀಯ ದಲಿತ ಸಾಹಿತಿಗಳ ಮೇಲೆ ಅಂಬೇಡ್ಕರ್ ಗಾಢ ಪ್ರಭಾವಬೀರಿದರು. ಅದರಂತೆ ಕನ್ನಡ ದಲಿತ ಸಾಹಿತ್ಯದಲ್ಲೂ ಸಂಚಲನ ಉಂಟಾಯಿತು. ಆರಂಭದ ದಲಿತ ಸಾಹಿತಿಗಳ ಸೌಮ್ಯ ಸ್ವಭಾವದ ರಚನೆಯಿಂದ ಹೊರಬಂದು ಆವೇಶ, ಸಿಟ್ಟು, ಆಕ್ರೋಶಗಳಿಂದ ಸಾಹಿತ್ಯ ರಚನೆ ಮಾಡಿದರು. ಶತ-ಶತಮಾನಗಳಿಂದ ಶೋಷಣೆಗೆ ಒಳಗಾಗಿರುವ ದಲಿತರು, ಬಡವರು, ಮಹಿಳೆಯರ ಪರವಾಗಿ ಮತ್ತು ಪುರೋಹಿತಶಾಹಿಗಳು ಮತ್ತು ಜಮೀನ್ದಾರರ ವಿರುದ್ಧ ಸಾಹಿತ್ಯದ ಮೂಲಕ ಸಮರ ಸಾರಿದರು. ಅಂತೆಯೇ ಪರಂಪರೆಯಿಂದ ಬೆಳೆದು ಬಂದ ಸಾಂಪ್ರದಾಯಿಕ ಆಚರಣೆಗಳನ್ನು ಕಡೆಗಣಿಸಿ ಅವುಗಳನ್ನು ಮೌಢ್ಯ ಸಂಪ್ರದಾಯವೆಂದು ಅಲ್ಲಗಳೆದರು, ದೇವರ ಅಸ್ತಿತ್ವವನ್ನು ಪ್ರಶ್ನಿಸಿದರು, ಕೆಳ ವರ್ಗದ ಹಲವು ಮೂಢ ನಂಬಿಕೆ - ಆಚರಣೆಗಳೇ ಅವರ ಹಿಂದುಳಿದಿರುವಿಕೆಗೆ ಕಾರಣ ಎಂದು ಅವುಗಳನ್ನು ತ್ಯಜಿಸಲು ಕರೆ ನೀಡಿದರು. ದಲಿತ - ಬಡವರ ದಾರುಣ ಬದುಕನ್ನು ಕಂಡು ಮರುಗಿ ಅವರ ಉದ್ಧಾರಕ್ಕಾಗಿ ಚಳುವಳಿ ರೂಪಿಸಿದರು. ಈ ನಿಟ್ಟಿನಲ್ಲಿ ಅನೇಕ ಸಂಘಟನೆಗಳು ಹುಟ್ಟಿಕೊಂಡವು. ಅವುಗಳಲ್ಲಿ ದಲಿತ ಸಂಘರ್ಷ ಸಮಿತಿ, ದಲಿತ ಲೇಖಕರ ಬಳಗ, ದಲಿತ ನೌಕರರ ಸಂಘ ಮುಂತಾದವುಗಳು ಪ್ರಮುಖವಾಗಿದ್ದು ಅವುಗಳ ಮೂಲಕ ತಮ್ಮ ಸಮಾಜದ ಬೇಡಿಕೆಗಳನ್ನು ತಿಳಿಸಿ ಸಮಾಜದ ಉದ್ಧಾರಕ್ಕೆ ಪ್ರಯತ್ನಿಸಿದರು. ಈ ಚಳುವಳಿಯನ್ನು ರೂಪಿಸಿದ ಪ್ರಮುಖ ಸಾಹಿತಿಗಳಲ್ಲಿ ಸಿದ್ಧಲಿಂಗಯ್ಯ, ದೇವನೂರು ಮಹದೇವ, ಅರವಿಂದ ಮಾಲಗತ್ತಿ, ಪ್ರೊ. ಹೆಚ್. ಗೋವಿಂದಯ್ಯ, ಡಾ. ಎಂ. ವೆಂಕಟಪ್ಪ, ಮುಳ್ಳೂರು ನಾಗರಾಜ,

ಮೊಗಳ್ಳಿ ಗಣೇಶ, ಕೆ.ಬಿ. ಸಿದ್ದಯ್ಯ, ಚನ್ನಣ್ಣ ವಾಲೀಕಾರ, ಅನುಸೂಯ ಕಾಂಬ್ಳೆ ಮುಂತಾದವರು ಸಾಹಿತ್ಯ ರಚನೆಯಲ್ಲಿ ತೊಡಗಿದರು. ಇವರೆಲ್ಲರೂ ಆಧುನಿಕ ಕನ್ನಡ ಸಾಹಿತ್ಯ ಪ್ರಕಾರಗಳಾದ ಕಾವ್ಯ, ಮಹಾಕಾವ್ಯ, ಕಥೆ, ಕಾದಂಬರಿ, ನಾಟಕ, ಆತ್ಮಕಥೆ ಮತ್ತು ವಿಚಾರ - ವಿಮರ್ಶೆಯ ಮೂಲಕ ಸಾಹಿತ್ಯದ ಭೂಮಿಕೆಯಲ್ಲಿ ಗುರುತಿಸಿಕೊಂಡರು. ಇಂತಹ ಪ್ರಗತಿಪರ ದಲಿತ ಚಳುವಳಿಯ ಹಿನ್ನೆಲೆಯಲ್ಲಿ ಬಂದ ಪ್ರಮುಖ ಕೃತಿಗಳನ್ನು ಅಧ್ಯಯನ ಮಾಡಬೇಕೆಂಬ ಕುತೂಹಲ ನನ್ನಲ್ಲಿ ಮೂಡಿದ್ದು ಸಹಜ. ಆದ್ದರಿಂದ ನನ್ನ ಗ್ರಹಿಕೆಗೆ ಅನುಗುಣವಾಗಿ ಸಂಪ್ರಬಂಧ ರಚನೆ ಮಾಡಲು ಪ್ರಮಾಣಿಕ ಪ್ರಯತ್ನ ಮಾಡುವ ಉದ್ದೇಶದಿಂದ 'ದಲಿತ ಸಾಹಿತ್ಯ' ವನ್ನು ಆಯ್ಕೆ ಮಾಡಿಕೊಂಡಿದ್ದೇನೆ.

## ಅಧ್ಯಯನದ ವ್ಯಾಪ್ತಿ :

ದಲಿತ ಸಾಹಿತ್ಯ ಸಂದರ್ಭದಲ್ಲಿ ಹಲವು ಕೃತಿಗಳು ಕನ್ನಡ ಸಾಹಿತ್ಯದ ಒಡಲು ಸೇರಿದವು. ಆದರೆ ಅವುಗಳೆಲ್ಲವನ್ನು ಅಧ್ಯಯನ ಮಾಡಲು ಸಮಯ ಹಾಗೂ ಪುಟಗಳ ಮಿತಿ ಇರುವುದರಿಂದ ಪ್ರಮುಖವಾದ ಕೃತಿಗಳನ್ನು ಮಾತ್ರ ಅಧ್ಯಯನಕ್ಕಾಗಿ ಆರಿಸಿಕೊಂಡಿದ್ದೇನೆ. ದಲಿತ ಸಾಹಿತ್ಯದ ಅಧ್ಯಯನದ ಹರವು, ಸಂಪ್ರಬಂಧ ರಚನೆಯ ಅನುಕೂಲದ ದೃಷ್ಟಿಯಿಂದ ಪ್ರಮುಖವಾಗಿ ಆರು ಅಧ್ಯಯನಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲನೆಯ ಅಧ್ಯಾಯದಲ್ಲಿ ಸಂಪ್ರಬಂಧ ರಚನೆಯ ಉದ್ದೇಶ ಮತ್ತು ವ್ಯಾಪ್ತಿಯನ್ನು ಚರ್ಚಿಸಲಾಗಿದೆ. ಎರಡನೆಯ ಅಧ್ಯಯನದಲ್ಲಿ 'ದಲಿತ' ಎಂದರೆ ಯಾರು ? ಮತ್ತು 'ದಲಿತ ಸಾಹಿತ್ಯ' ಎಂದರೆ ಯಾವುದು ? ಎಂಬುದನ್ನು ವಿವರಿಸಲಾಗಿದೆ. ಮೂರನೆಯ ಅಧ್ಯಾಯದಲ್ಲಿ ದಲಿತ ಸಾಹಿತ್ಯದ ಒಟ್ಟು ಮತ್ತು ಬೆಳವಣಿಗೆ ಹಾಗೂ ಸ್ವರೂಪ ಮತ್ತು ಲಕ್ಷಣ, ಪ್ರೇರಣೆ ಮತ್ತು ಪ್ರಭಾವಗಳು ಎಂಬ ಉಪ ಶೀರ್ಷಿಕೆಯ ಅಡಿಯಲ್ಲಿ ವಿವೇಚನೆ ಮಾಡಲಾಗಿದೆ. ನಾಲ್ಕನೇ ಅಧ್ಯಯವು ದಲಿತ ಸಾಹಿತ್ಯದ ವಿವಿಧ ಪ್ರಕಾರಗಳಾದ ಕಾವ್ಯ, ಮಹಾಕಾವ್ಯ, ಕಥೆ, ಕಾದಂಬರಿ, ನಾಟಕಗಳು, ಆತ್ಮಕಥೆ ಮತ್ತು ವಿಮರ್ಶೆಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ಐದನೆಯ ಅಧ್ಯಯದಲ್ಲಿ ದಲಿತ ಸಾಹಿತ್ಯದ ಭಾಷಿಕ ನೆಲೆಯನ್ನು ಚರ್ಚಿಸಲಾಗಿದೆ. ಆರನೆಯ ಅಧ್ಯಯದಲ್ಲಿ ದಲಿತ ಸಾಹಿತ್ಯದ ಇತಿ-ಮಿತಿಗಳನ್ನು ಚರ್ಚಿಸುತ್ತಾ ಉಪ ಸಂಹಾರ ನೀಡಲಾಗಿದೆ. ಕೊನೆಯ ಭಾಗದಲ್ಲಿ ಸಂಪ್ರಬಂಧದ ರಚನೆಗಾಗಿ ಬಳಸಿಕೊಂಡ ಪರಾಮರ್ಶನ ಗ್ರಂಥಗಳ ಪಟ್ಟಿಯನ್ನು ನೀಡಲಾಗಿದೆ.

# 'ದಲಿತ' ಮತ್ತು 'ದಲಿತ ಸಾಹಿತ್ಯ'ದ ವಿವೇಚನೆ

'ದಲಿತ ಸಾಹಿತ್ಯ'ದ ವಿವೇಚನೆಗೆ ಮೊದಲು 'ದಲಿತ' ಎಂದರೆ ಯಾರು ಎನ್ನುವುದನ್ನು ತಿಳಿಯಬೇಕು. ಈ ದಲಿತ ಎನ್ನುವ ಪದ ೧೯೭೦ರ ದಶಕದಿಂದ ಈಚೆಗೆ ಹೆಚ್ಚು ಚರ್ಚೆಗೆ ಒಳಗಾಯಿತು. ದಲಿತ ಎಂಬ ಪದ 'ಪ್ರಗತಿ ಪಂಥದ' ಬರಹಗಾರರ ಸಂದರ್ಭದಲ್ಲಿ ಬಳಕೆಗೆ ಬಂದರೂ ಅದನ್ನು ವ್ಯಾಖ್ಯಾನದ ಸಂದರ್ಭದಲ್ಲಿ ಬಂಧಿಸಿರುವ ಪ್ರಯತ್ನ ಆರಂಭವಾದುದು 'ಕರ್ನಾಟಕದ ಬರಹಗಾರರು ಮತ್ತು ಕಲಾವಿದರ ಒಕ್ಕೂಟದ' ಸಂದರ್ಭದಿಂದ. ಆದರೆ ಬಿರುಸಿನ ಚರ್ಚೆ ನಡೆದದ್ದು ದಲಿತ ಬಂಡಾಯ ವೇದಿಕೆ ಕಾಣಿಸಿಕೊಂಡಾಗ ದಲಿತ ಎಂದರೆ ಯಾರುಎಂಬುದನ್ನು ಕುರಿತು ವೈಯಕ್ತಿಕವಾಗಿ ಹಲವರು ಚರ್ಚಿಸಿದ್ದಾರೆ. ಅವುಗಳನ್ನು ಒಟ್ಟಾರೆ ಮೂರು ರೀತಿಯಲ್ಲಿ ಸ್ಪಷ್ಟಪಡಿಸಬಹುದು.

ಅ. 'ಶೋಷಣೆ ಎಂಬ ಪದಕ್ಕೆ ಜಾತಿ ಭೇದವಿಲ್ಲ. ಆರ್ಥಿಕ ಸಾಮಾಜಿಕ ರಾಜಕೀಯ ರಂಗದಲೆಲ್ಲಾ ಶೋಷಣೆಗೆ ಒಳಗಾದು ಎಲ್ಲ ಜನರೂ ದಲಿತರು'

ಆ. ಪಂಚಮರು ಅಥವಾ ಬಹಿಷ್ಕೃತರು ಎಂದು ಕರೆಸಿಕೊಳ್ಳುವ ಆಸ್ಪೃಶ್ಯರೆಲ್ಲರೂ ದಲಿತರು.

ಇ. ಆಸ್ಪೃಶ್ಯರೂ ಸೇರಿದಂತೆ ಅಸ್ಪೃಶ್ಯತೆಯ ನೋವನ್ನು ಅನುಭವಿಸದಿದ್ದರೂ ಅಸ್ಪೃಶ್ಯರ ಹಾಗೆ ಆರ್ಥಿಕ, ಸಾಮಾಜಿಕ ರಂಗದಲ್ಲಿ ಶೋಷಣೆಗೆ ಒಳಗಾದ ಬಡವರೂ ದಲಿತರೆಂದು ಕರೆಸಿಕೊಳ್ಳುತ್ತಾರೆ.

ಹೀಗೆ ದಲಿತ ಪದವನ್ನು ದಲಿತರು ಮತ್ತು ದಲಿತೇತರರು ಎಲ್ಲರೂ ಚರ್ಚಿಸುದರಿಂದಲೇ ವಿಭಿನ್ನ ವ್ಯಾಖ್ಯಾನಗಳು ಬಂದವು. ನಂತರದಲ್ಲಿ ಈ ರೀತಿಯ ದ್ವಂದ್ವವನ್ನು ಸರಿಪಡಿಸಿ ಸಾಮಾನ್ಯ ವ್ಯಾಖ್ಯಾನಕ್ಕೆ ಬದ್ಧರಾಗಿದ್ದು ಮುನ್ನಡೆದದ್ದು ಕಂಡು ಬರುತ್ತದೆ.

> " ಶತ ಶತಮಾನಗಳಿಂದ ಜನಸಮುದಾಯದಲ್ಲಿ ಆರ್ಥಿಕ, ರಾಜಕೀಯ, ಸಾಮಾಜಿಕ ಮತ್ತು ಶೈಕ್ಷಣಿಕವಾಗಿ ಶೋಷಣೆಗೆ ಒಳಗಾದವರು. ಒಟ್ಟು ಮನುಷ್ಯ ಸಮಾಜದೊಂದಿಗೆ ಬದುಕಲಾಗದೆ ಊರ ಹೊರಗೆ ವಾಸಿಸಿ ಕೀಳು ವೃತ್ತಿಗೆ ಅವಲಂಬಿತರಾಗಿ, ಹೆಸರು ಹೇಳಿಕೊಳ್ಳಲೂ ನಾಚಿಕೆ ಪಡುವ ಅಸ್ಪೃಶ್ಯರು ಅಷ್ಟು ಬಹಿಸ್ಕೃತಿರೆನಿಸಿ ಕೊಂಡವರೆಲ್ಲರೂ ದಲಿತ ರೆನಿಸಿಕೊಳ್ಳುತ್ತಾರೆ ".[೧]

ದಲಿತ ಎಂದರೆ ಯಾರು? ಎನ್ನುವ ಪ್ರಶ್ನೆಗೆ ಸಾಮಾನ್ಯವಾಗಿ ಮೂರು ಬಗೆಯ ವ್ಯಾಖ್ಯಾನವನ್ನು ಗಮನಿಸಿದ್ದೇವೆ. ಈ ವ್ಯಾಖ್ಯಾನಗಳಿಗೆ ಅನುಗುಣವಾಗಿಯೇ 'ದಲಿತ ಸಾಹಿತ್ಯ' ಎಂದರೆ ಯಾವುದು ಎನ್ನುವುದರ ವ್ಯಾಖ್ಯಾನ ಮಾಡಿರುವುದು ಕಂಡು ಬರುತ್ತದೆ.

ಅ. ದಲಿತರ ಕುರಿತು ಯಾರು ಬರೆದರೂ ದಲಿತ ಸಾಹಿತ್ಯವಾಗುತ್ತದೆ

ಆ. ದಲಿತರೇ ಬರದದ್ದು ದಲಿತ ಸಾಹಿತ್ಯವಾಗುತ್ತದೆ

ಇ. ಪ್ರಗತಿಪರರು ಮತ್ತು ದಲಿತರು ದಲಿತರನ್ನು ಕುರಿತು ಬರೆದದ್ದು ದಲಿತ ಸಾಹಿತ್ಯವಾಗುತ್ತದೆ.

---

೧. ಅರವಿಂದ ಮಾಗಲತ್ತಿ : ದಲಿತ ಸಾಹಿತ್ಯ ಚಳಿವಳಿಯ ತಾತ್ವಿಕ ಚಿಂತನೆ, ಹೊಸ ದಿಕ್ಕು ಪ್ರಕಾಶನ, ಬೆಂಗಳೂರು. ೧೯೮೯, ಪುಟ - ೭

ಹೀಗೆ ಮೂರು ರೀತಿಯ ವ್ಯಾಖ್ಯಾನಗಳು ಕಂಡು ಬಂದರೂ, ಈ ವ್ಯಾಖ್ಯಾನಗಳೊಂದಿಇಗೆ ಹಲವಾರು ಪ್ರಶ್ನೆಗಳೇಳುತ್ತದೆ. ದಲಿತರೇ ಬರೆದದ್ದು ದಲಿತ ಸಾಹಿತ್ಯವಾಗುತ್ತದೆಯೆ ದಲಿತ ಬರೆದ ದೇವರ ಭಜನೆಯೂ ದಲಿತ ಸಾಹಿತ್ಯವಾಗುತ್ತದೆಯೆ? ಒಬ್ಬ ಸಂಪ್ರದಾಯವಾದ ದಲಿತರ ಯಥಾಸ್ಥಿತಿಯನ್ನು ಸಾಹಿತ್ಯದ ಮೂಲಕ ಮಂಡಿಸಿದಾಗ ಅದೂ ದಲಿತ ಸಾಹಿತ್ಯವಾಗುತ್ತದೆಯೇ? ದಲಿತರು ಬರೆದದ್ದು ರಕ್ತ ಮಾಸಂದಿಂದ ಕೂಡಿದೆ. ಅಥೆಂಟಿಕ್ ಆಗಿರುತ್ತದೆ. ದಲಿತೇತರರು ಬರೆದದ್ದು ಅಥವಾ ಪ್ರಗತಿ ಪರರು ಬರೆದದ್ದು ಅಷ್ಟೇ ಅಥೆಂಟಿಕ್ ಆಗಿರಲು ಸಾಧ್ಯವೆ? ಬರಿ ಅನುಕಂಪೆಯಿಂದ ದಲಿತ ಸಾಹಿತ್ಯ ಹುಟ್ಟುತ್ತದೆಯೇ ಈ ಪ್ರಶ್ನೆಗಳ ಕುರಿತು ಚರ್ಚಿಸಿದಾಗ ದಲಿತ ಸಾಹಿತ್ಯವನ್ನು ಈ ಕೆಳಕಂಡ ಮೂರು ರೀತಿ ವರ್ಗೀಕರಿಸಿ ಕೊಂಡು ಪರಿಹಾರ ಕಂಡು ಕೊಳ್ಳಬಹುದು.

"೧. **ದಲಿತ ಸಾಹಿತ್ಯ :** ದಲಿತರು - ದಲಿತೇತರರು ದಲಿತ ಪ್ರಜ್ಞೆಯಿಂದ ದಲಿತರನ್ನು ಕುರಿತು ಸೃಷ್ಟಿಸಿದ ಸಾಹಿತ್ಯವೇ ದಲಿತ ಸಾಹಿತ್ಯ ಇದರಲ್ಲಿ ದಲಿತೀಯ, ದಲಿತೇಯ ಮತ್ತು ಅಂಶಿಕ ದಲಿತ ಸಾಹಿತ್ಯ ಒಳಗೊಂಡಿರುತ್ತದೆ

೨. **ದಲಿತೀಯ ಸಾಹಿತ್ಯ :** ದಲಿತರು ದಲಿತತ್ವದ ಪ್ರಜ್ಞೆಯಿಂದ ದಲಿತರನ್ನು ಕುರಿತು ಬರೆದಿದ್ದ ದಲಿತೇಯ ಸಾಹಿತ್ಯವಾಗುತ್ತದೆ

೩. **ದಲಿತೇಯ ಸಾಹಿತ್ಯ :** ಪ್ರಗತಿ ಪರದಲಿತರು ದಲಿತ ಪ್ರಜ್ಞೆಯಿಂದ ದಲಿತರನ್ನು ಕುರಿತು ಬರೆದ ಸಾಹಿತ್ಯವೇ ದಲಿತೇಯ ಸಾಹಿತ್ಯವಾಗುತ್ತದೆ."[೨]

ಹೀಗೆ ದಲಿತ ಸಾಹಿತ್ಯ ಕುರಿತು ಚರ್ಚಿಸುವಾಗ ಬರಿ ದಲಿತರೇ ದಲಿತರನ್ನು ಕುರಿತು ಬರೆದ ಸಾಹಿತ್ಯ ಮಾತ್ರ ದಲಿತ ಸಾಹಿತ್ಯ ಎಂದು ವಾದಿಸಿದವರೂ ಉಂಟು. ಆದರೆ ಈ ರೀತಿ ನೋಡಿದರೆ ಸಾಹಿತ್ಯದ ಭಂಡಾರದೊಳಗೆ ಅಥವಾ ಸಾಹಿತ್ಯ ಭೂಮಿಕೆಯಲ್ಲಿ ಮತ್ತೊಂದು ದಲಿತ ಕೇರಿಯನ್ನು ಸೃಷ್ಟಿಸಿದಂತಾಗುತ್ತದೆ. ಆಗ ದಲಿತ ಸಾಹಿತ್ಯ ಒಂದೇ ವಾರ್ಡಿನ ರೋಗಿಗಳು ನರಳಿದ ಧ್ವನಿಯಾಗುತ್ತದೆ. ದಲಿತರು ಊರ ಹೊರಗಿದ್ದು ಬದುಕಿದ್ದಾರೆ. ಆದರೆ ಊರಿನವರ ಸಂಬಂಧ ಕಡಿದು ಕೊಂಡು ಬದುಕಿಲ್ಲ. ಎರಡು ಕೈಗಳು ಸೇರಿದಾಗಲೇ ಚಪ್ಪಾಳೆ ಧ್ವನಿ, ಆದ್ದರಿಂದ ದಲಿತರು, ದಲಿತೇತರರು ದಲಿತ ಪ್ರಜ್ಞೆಯಿಂದ ಕುರಿತು ಬರೆದದ್ದು ದಲಿತ ಸಾಹಿತ್ಯವಾಗುತ್ತದೆಯೆ ಒಪ್ಪಿಕೊಳ್ಳಬೇಕಾಗಿದೆ. ಮೊದಲು ದಲಿತರನ್ನು ಕುರಿತು ಬರೆದವರು ಮತ್ತು ದಲಿತ ಸಾಹಿತ್ಯ ಕುರಿತ ವ್ಯಾಖ್ಯಾನಿಸಿದವರು ದಲಿತೇತರರೇ ಎನ್ನುವುದು ಗಮನಾರ್ಹ.

ದಲಿತೇತರರು ಬರೆಯುವಾಗ ಈ ಸಾಹಿತ್ಯದಲ್ಲಿ ದಲಿತರೇ ಕೇಂದ್ರ ಬಿಂದು ವಾಗಿರಬೇಕೆಂಬ ನಿಯಮವೇನೂ ಇಲ್ಲ. ದಲಿತರೊಂದಿಗಿನ ಸಂಬಂಧಗಳನ್ನು ಹಂಚಿಕೊಳ್ಳುವಾಗ ಆತನ ದಲಿತರೊಂದಿಗಿನ ಒಳಗೊಳ್ಳುವಿಕೆಯ ಪ್ರಮಾಣ, ಆತನ ಬರವಣಿಗೆಯ ಸಾಮರ್ಥ್ಯ, ಪಕ್ವತೆ, ಇವೆಲ್ಲವೂ ಮುಖ್ಯವಾಗುತ್ತದೆ. ಒಬ್ಬ ಸಮರ್ಥ ಲೇಖಕ ದಲಿತನಷ್ಟೇ ಸತ್ವಯುತ ಕೃತಿಯನ್ನು ನೀಡಬಲ್ಲ ಎಂಬುದನ್ನು ನಾವು ಅರಿಯಬೇಕಾಗಿದೆ.

---

೨. ಅರವಿಂದ ಮಾಗಲತ್ತಿ : ದಲಿತ ಸಾಹಿತ್ಯ ಚಳವಳಿಯ ತಾತ್ವಿಕ ಚಿಂತನೆ, ಹೊಸ ದಿಕ್ಕು ಪ್ರಕಾಶನ, ಬೆಂಗಳೂರು. ೧೯೮೯, ಪುಟ - ೧೧

# ಕನ್ನಡದಲ್ಲಿ ದಲಿತ ಸಾಹಿತ್ಯದ ಹುಟ್ಟು ಮತ್ತು ಬೆಳವಣಿಗೆ

ದಲಿತ ಸಾಹಿತ್ಯ ಒಂದು ಚಳುವಳಿ ರೂಪ ಪಡೆದದು ಹಾಗೂ ತನ್ನದೇ ಆದ ಸ್ಥಾನ ನಿರ್ಮಿಸಿಕೊಂಡದ್ದು ೧೯೭೦ರ ದಶಕದಲ್ಲೇ ಆದರೂ ಕನ್ನಡ ಸಾಹಿತ್ಯ ಪರಂಪರೆಯಲ್ಲಿಯೇ ಇದನ್ನು ಕಾಣಬಹುದು. ನಮ್ಮ ಹಲವಾರು ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಅಲ್ಲಲ್ಲಿ ದಲಿತ ಧೋರಣೆ ವ್ಯಕ್ತ ವಾಗಿರುವುದು ಕಂಡು ಬರುತ್ತದೆ. ಆದಿಕವಿ ಪಂಪನ ಭಾರತದಲ್ಲಿಯೇ ಸೂತಕುಲದ ಕರ್ಣನು ಕುಲದ ವಿಚಾರ ಬಂದಾಗ ಬ್ರಾಹ್ಮಣನಾದ ದ್ರೋಣನನ್ನು ಕುರಿತು

**"ಕುಲಮನೆ ಮುನ್ನಂ ಉಗ್ಗಡಿಪಿರಿ**
**ಕುಲಂ ಕುಲಮಲ್ತು ಚಲಂ ಕುಲಂ, ಗುಣಂ ಕುಲಂ, ಅಭಿಮಾನವೊಂದೆ**
**ಕುಲಂ ಅಣ್ಮುಕುಲಂ ನಿಮ್ಮ**
**ಕುಲಂ ನಿಮಗೆ ಆಕುಲಮಂ ಉಂಟು ಮಾಡುಗುಂ"**

ಎಂದು ಹೇಳುವುದು ಉತ್ತಮ ಕುಲದವರ ವಿರುದ್ಧ ನಡೆದ ಒಂದು ಸಣ್ಣ ಪ್ರತಿಭಟನೆಯ ಪ್ರತೀಕವಾಗಿದೆ. ಅದೇ ರೀತಿ, ಹರಿಹರನು ರಾಜರನ್ನು ಕುರಿತು ಬರೆಯುವುದು ಅವನರನ್ನು ಓಲೈಸುವುದು ಅಪರಾಧ. ಅರ್ಥಹೀನ ಎಂದು ಶರಣರನ್ನು ಕುರಿತು ಕಾವ್ಯ ರಚನೆ ಮಾಡ ಹೊರಟು ಎಲ್ಲಾ ವರ್ಗದ ಶರಣರನ್ನು ಕುರಿತು ರಗಳೆಗಳನ್ನು ಬರೆದುದು ಪ್ರಭುತ್ವ ವಿರೋಧದ ಜೊತೆಗೆ ಸಾಮಾನ್ಯ ಜನರಿಗೂ ಪ್ರಿಯಾಗುವ ಶರಣ ವರ್ಗವನ್ನು ಕುರಿತು ಬರೆದು ಕೆಳವರ್ಗದವರನ್ನು ಕಾವ್ಯದಲ್ಲಿ ಗುರುತಿಸಿದ ಕೀರ್ತಿ ಆತನಿಗೆ ಸಲ್ಲುತ್ತದೆ. ಹಾಗೆಯೇ ಸರ್ವಜ್ಞನು ನೇರವಾಗಿ ತನ್ನ ವಚನಗಳ ಮೂಲಕ ಜಾತಿ ಕುಲದ ಬಗ್ಗೆ ತೀವ್ರವಾಗಿ ವಿರೋಧ ವ್ಯಕ್ತಪಡಿಸುತ್ತಾ,

**"ಜಾತಿ ಹೀನರ ಮನೆಯು ಜೋತಿ ತಾಹೀನವೇ**
**ಜಾತಿ ವಿಜಾತಿ ಎನಬೇಡ ದೇವನೊಲಿ**
**ದಾತನೇ ಜಾತ ಸರ್ವಜ್ಞ"**

ಎಂದು ಕಿಡಿಕಾರುತ್ತಾನೆ. ಇನ್ನು ವಚನ ಕಾರರಲ್ಲಿಯಂತೂ ದಲಿತ ಧೋರಣೆ ಅತ್ಯಂತ ನಿಚ್ಚಳವಾಗಿ ವ್ಯಕ್ತವಾಗಿರುವುದನ್ನು ಕಾಣಬಹುದು. ಬಸವಣ್ಣ, ಅಲ್ಲಮ, ಡೋಹರ ಕಕ್ಕಯ್ಯ, ಅಂಬಿಗರ ಚೌಡಯ್ಯ, ಮಾದಾರ ಚನ್ನಯ್ಯ, ಹರಳಯ್ಯ, ಕುಂಬಾರ ಗುಂಡಯ್ಯ ಮುಂತಾದ ವಚನ ಕಾರರು ವಚನಗಳನ್ನು ರಚಿಸಿದರು. ಇಲ್ಲಿ ಜಾತಿ ಮುಖ್ಯವಾಗದೆ ಕಾಯಕ ಮುಖ್ಯವಾಗಿ 'ಕಾಯಕವೇ ಕೈಲಾಸ' ಎಂಬ ಧೋರಣೆಯೊಂದಿಗೆ ಎಲ್ಲರೂ ಒಂದಾದರು. ವಚನ ಸಾಹಿತ್ಯದ ನೇತಾರನಾದ ಬಸವಣ್ಣ ಸಮಾಜದ ನಿಕೃಷ್ಟ ಪದ್ಧತಿಯಿಂದ ಜಾತಿ ಪದ್ಧತಿಯನ್ನು ಕುರಿತು

"ಕಾಸಿ ಕಮ್ಮಾರನಾದ,
ಹಾಸಿ ಮಡಿವಾಳನಾದ
ಹಾಸನಿಕ್ಕಿ ಸಾಲಿಗನಾದ
ವೇದವನೋದಿ ಹಾರುವನಾದ

ಎಂದು, ಜಾತಿ ಹುಟ್ಟಿನಿಂದ ಬಂದುದಲ್ಲ ವೃತ್ತಿಯನ್ನಾಧರಿಸಿ ಬಂದುದು. ಎಲ್ಲಾ ಮಾನವರೂ ಒಂದೇ,"ಕೊಲುವವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ" ಎಂದು, ಜಾತಿಯ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸುತ್ತಾನೆ.

ಇಡೀ ಭಾರತೀಯ ಸಾಹಿತ್ಯ ಪರಂಪರೆಯ ಮೂಲ ಕರ್ತೃಗಳು ನಿವ್ನ ವರ್ಗದವರು ಎಂದು ಹೇಳುತ್ತಾ ;

"ಸಾಂಖ್ಯ ಶ್ವಪಚ, ಅಗಸ್ತ್ಯ ಕಬ್ಬಿಲ,
ದುರ್ವಾಸ ಮಚ್ಚಿಗ, ದಧೀಚಿ ಕೀಲಿಗ,
ಕಶ್ಯಪ ಕಮ್ಮಾರ, ರೋಮಜ ಕುಂಚುಗಾರ,
ಕೌಂಡಿನ್ಯ ನಾವಿದನೆಂಬುದರಿದು
ಮತ್ತೆ ಕುಲವುಂಟೆಂದು ಛಲಕ್ಕೆ ಹೋರಲೇತಕ್ಕೆ
ಇಂತಿ ಸಪ್ತ ಋಷಿಗಳೆಲ್ಲರೂ
ಸತ್ಯದಿಂದ ಮುಕ್ತರಾದುದನರಿಯದೆ
ಅಸತ್ಯದಿಂ ನಡೆದು
ವಿಪ್ರರು ನೀವು ಘನವೆಂದು ಹೋರುವ
ಹೊತ್ತು ಹೋಕರ ಮಾತೇಕೆ

ಇದು ಮಾದಾರ ಚನ್ನಯ್ಯ ತನ್ನ ಕುಲದ ಹಿನ್ನೆಲೆಯಲ್ಲಿ ಪರಂಪರೆಯನ್ನು ಮರುಹೊಂದಿಸುವ ಮೂಲಕ ಆತ್ಮವಿಶ್ವಾಸವನ್ನು ಹೆಚ್ಚಿಸಿಕೊಳ್ಳುವ ಪ್ರಯತ್ನಮಾಡುತ್ತಾರೆ. ಯಾವ ಪರಂಪರೆಯನ್ನು ದಿಕ್ಕರಿಸುವೆಯೋ ಆ ಪರಂಪರೆಯಲ್ಲಿಯೇ ಕೆಲ ಸ್ವೀಕಾರಾರ್ಹ ಅಂಶಗಳು ಇರಬಲ್ಲವೆಂಬ ತಿಳುವಳಿಕೆ ಕೂಡ ಬಂಡಾಯಗಾರನಿಗೆ ಅವಶ್ಯ ಹನ್ನೆರಡನೇ ಶತಮಾನದ ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ ಅಂಬಿಗರ ಚೌಡಯ್ಯ ಮಡಿವಾಳ ಮಾಚಿದೇವ ಇತ್ಯಾದಿ ಕೆಳವರ್ಗದ ವಚನಕಾರರ ಒಳಗೆ ಅಡಗಿರುವ ಪ್ರತಿಭಟನಾ ಮಾದರಿ ದಲಿತ ಸಾಹಿತ್ಯಕ್ಕೊಂದು ದೀರ್ಘ ಪರಂಪರೆ ಒದಗಿಸುವ ಹಾದಿಯಲ್ಲಿಯೇ ಇದೆ. ಹೊಸ ಗನ್ನಡ ಸಾಹಿತ್ಯದಲ್ಲಿ ನವೋದಯ ಕಾಲದ ಸಾಹಿತಿಗಳಾದ ಕುವೆಂಪು, ಕಾರಂತ ಮೊದಲಾದವರು ತಮ್ಮ ಕಾದಂಬರಿಗಳಲ್ಲಿ ದಲಿತ ಸಂವೇದನೆಯ ಚಿತ್ರಣವನ್ನು ನೀಡಿದ್ದಾರೆ. ಕುವೆಂಪು ಅವರ "ಮಲೆಗಳಲ್ಲಿ ಮದುಮಗಳು" ಕಾದಂಬರಿಯ ಪ್ರಧಾನ ಪಾತ್ರಗಳಾದ 'ಗುತ್ತಿ,' ಮತ್ತು 'ತಿಮ್ಮಿ'ಯರು ದಲಿತ ಲೋಕದಿಂದ ಬಂದವರು. ಇಲ್ಲಿ ಆ ಕಾಲದಲ್ಲಿ ದಲಿತ ಜೀವನ ಮತ್ತು ಸಮಾಜದಲ್ಲಿ ಅವರ ಪಾತ್ರವೇನು ಎಂಬುದನ್ನು ಸಮಗ್ರವಾಗಿ ಚಿತ್ರಿಸಲಾಗಿದೆ. ಅದೇ ರೀತಿ ಕಾರಾಂತರ "ಚೋಮನ ದುಡಿ" ಕಾದಂಬರಿಯು ದಲಿತರ ನೋವನ್ನು ಅನುಭಾವಿಕವಾಗಿ ಸೆರೆ ಹಿಡಿಯುವಲ್ಲಿ ಯಶಸ್ವಿಯಾಗಿದೆ. ಚೋಮನ ದುಡಿಯ ದಲಿತ 'ಚೋಮ'ನು ಕೃಷಿಕನಾಗಲು ಹೊರಟು ಅನೇಕ ನೋವನ್ನು ಅನುಭವಿಸಿ ಹಾಗೆಯೆ ಉಳಿದು ಶೋಚನೀಯ ಬದುಕನ್ನು ಸಾಗಿಸುತ್ತಾ ಆ ಕಾಲದ ದಲಿತ ಜೀವನದ ಪ್ರತಿನಿಧಿಯಾ ಕಾಣುತ್ತಾನೆ. ಹಾಗೆಯೇ ಕುವೆಂಪು ಅವರ ನಾಟಕಗಳಾದ "ಜಲಗಾರ ", "ಶೂದ್ರತಪಸ್ವಿ"ಯಲ್ಲೂ ದಲಿತ ಮತ್ತು ಶೂದ್ರ ವರ್ಗದ ಪರವಾಗಿ ಹಾಗೂ ಪುರೋ ಹಿತಶಾಹಿಯ ವಿರೋಧವನ್ನು ಕಾಣಬಹದು. ಅಲ್ಲದೆ ಕುವೆಂಪು ಅವರ

ಕಾವ್ಯಗಳಲ್ಲಿಯೂ ಕೆಳವರ್ಗದ ಜನರ ಚಿತ್ರಣ ಪಡಿಮಾಡಿದ್ದು ಅವರು ಸಾಮಾನ್ಯರನ್ನು 'ಶ್ರೀ ಸಾಮಾನ್ಯ' ಎಂದು ಕರೆದು ತಮ್ಮ ಸಾಹಿತ್ಯದ ಎಲ್ಲಾ ಮೆಟ್ಟಲುಗಳಲ್ಲೂ ಕೆಳವರ್ಗದ ಜನರ ಜೀವನವನ್ನು ಸಮಗ್ರವಾಗಿ ಚಿತ್ರಿಸುವುದರಲ್ಲಿ ಯಶಸ್ವಿಯಾದರು.

ಪ್ರಗತಿಶೀಲ ಕಾಲಘಟ್ಟದಲ್ಲಿ ಮಾರ್ಕ್ಸ್‌ವಾದದ ಪ್ರಭಾವದಿಂದ ಸಮಾಜವನ್ನು ಎರಡು ವರ್ಗವಾಗಿ ನೋಡಿದ ಕಾದಂಬರಿಕಾರರು ದಲಿತರ ಜೀವನದ ಕಡೆ ಪ್ರತ್ಯೇಕವಾಗಿ ಗಮನ ಹರಿಸದಿರುವುದು ಕಂಡು ಬರುತ್ತದೆ. ಆದರೆ ಚದುರಂಗರ "ವೈಶಾಖ" ಕಾದಂಬರಿಯಲ್ಲಿ ದಲಿತ ಪಾತ್ರ ದಾರಿ 'ಲಕ್ಕ' ಅಲ್ಲಿನ ನಾಯಕನಾಗಿ ಚಿತ್ರಿತವಾಗಿದ್ದು ಪುರೋಹಿತಶಾಹಿ ವ್ಯವಸ್ಥೆಯ ಮೌಢ್ಯತೆಗಳಿಗೆ ತನಗೆ ಅರಿವಿಲ್ಲದಂತೆಯೇ ತಿಲಾಂಜಲಿ ಕೊಡುತ್ತಾನೆ. ಇಲ್ಲಿಯೂ ಆತ ದಲಿತ ಲೋಕದ ಪ್ರತಿನಿದಿಯಾಗಿ ದಲಿತರ ನಾಯಕನಾಗುವುದರ ಜೊತೆಗೆ ಕಾದಂಬರಿಯ ನಾಯಕನಾಗಿರುವುದು ವಿಶೇಷ.

ನವ್ಯ ಸಾಹಿತ್ಯ ಸಂದರ್ಭದಲ್ಲಿ ಸಮಾಜದ ಮನವೀಯ ಮೌಲ್ಯಗಳಿಗೆ ಮುನ್ನಡೆ ಹೊರತು ಸಮಾಜದ ಜೊತೆ ಸಾಹಿತ್ಯದ ಸಂಬಂಧವನ್ನು ಗಾಢವಾಗಿಸುವ ಪ್ರಯತ್ನ ಕಾಣುತ್ತದೆ. ನವ್ಯರಲ್ಲಿ ಪ್ರಮುಖರಾದ ಅನಂತಮೂರ್ತಿ ಅವರ ಕಾದಂಬರಿಗಳಾದ "ಸಂಸ್ಕಾರ", "ಭಾರತೀಪುರ"ಗಳಲ್ಲಿ ದಲಿತ ಜೀವನದ ಚಿತ್ರಣ ಬರುತ್ತದೆ. ಭಾರತೀ ಪುರದ ಜಗನ್ನಾಥ ತಾನು ದಲಿತ ಪರವಾದಿ ಎಂದು ದೇವಾಲಯಗಳಲ್ಲಿ ದಲಿತರಿಗೆ ಪ್ರವೇಶವೆ ನೀಡಬೇಕೆಂದು ಕೊನೆಯತನಕ ಹೋರಾಡಿದರೂ ತಾನೇ ಮೌಢ್ಯತೆಗೆ ಒಳಗಾಗಿ ಭಯಭೀತನಾಗುತ್ತಾನೆ. ಕೊನೆಯಲ್ಲಿ ದೇವಸ್ಥಾನವನ್ನು ಪ್ರವೇಶಿಸಿದರೂ ಅಲ್ಲಿ ಮಂಜುನಾಥ ದೇವರ ವಿಗ್ರಹವೇ ಇರುವುದಿಲ್ಲ ಹಾಗೂ ದೇವಾಲಯ ಪ್ರವೇಶಿಸಿದ ದಲಿತ ಕೇರಿಯ ಗುಡಿಸಲುಗಳಿಗೆ ಬೆಂಕಿ ಬೀಳುತ್ತದೆ. ಇಲ್ಲಿ ದಲಿತರ ಜೀವನ ಚಿತ್ರಿಸಿದ ಲೇಖಕರು ಕೊನೆಗೆ ದಲಿತ ಪರವಾಗಿಲ್ಲವಾಗಿರುವುದು ಸಾಬೀತಾಗುತ್ತದೆ.

ಹೀಗೆ ಪರಂಪರೆಯಿಂದ ಇಲ್ಲಿಯವರೆಗೂ ದಲಿತ ಸಾಹಿತ್ಯ ಧೋರಣೆಗಳು ವಿವಿಧ ಮಜಲುಗಳಲ್ಲಿ ಗೋಚರವಾಗಿವೆ.

ಶಿಷ್ಟ ಸಾಹಿತ್ಯ ಪರಂಪರೆಯಲ್ಲದೆ ಅದಕ್ಕೆ ವಿರುದ್ಧವಾದ ಪರಿಶಿಷ್ಟ ಪರಂಪರೆಯೊಂದು ಲಿಖಿತ ಸಾಹಿತ್ಯಕ್ಕೆ ಸಮನಾಂತರವಾಗಿ ಹಾಗೂ ಮೌಖಿಕವಾಗಿ ಕಾಲಪ್ರವಾಹದಲ್ಲಿ ಸಾಗಿ ಬಂದಿರುವುದನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಲಿಖಿತ ಸಾಹಿತ್ಯ ತನ್ನ ಒಳಕ್ಕೆ ಬರಮಾಡಿಕೊಳ್ಳಲೊಪ್ಪದ ಎಲ್ಲಾ ಸಂವೇಧನೆಗಳು, ವಿಚಾರಗಳು ಮೌಖಿಕ ಪರಂಪರೆಯಲ್ಲಿ ವಿಜೃಂಭಿಸಿವೆ." ದಲಿತರು ಆಶಾವಾದದಿಂದ ಎದುರು ನೋಡುವ ಪರಂಪರೆ ಇದು. ಮಂಟೇಸ್ವಾಮಿ, ಮಲೈ ಮಹದೇಶ್ವರ, ಸಿದ್ದಪ್ಪಾಜಿ, ಮರುಳು ಸಿದ್ಧ, ಜುಂಜಪ್ಪ, ಬಕಾಲ, ದಕ್ಲಾ ಇತ್ಯಾದಿ ಉಪೇಕ್ಷಿತ ಜಾತಿಯ ನಾಯಕರೆಲ್ಲಾ ವಿಜೃಂಬಿ ಸುವ ಕಾವ್ಯವಿದು."[೧]

ಇದನ್ನು ಸಾಹಿತ್ಯ ಎಂದು ಎದುರುಗೊಂಡಾಗ ದಲಿತರಿಗೊಂದು ದೊಡ್ಡ ಪರಂಪರೆ ಗುಪ್ತಗಾಮಿನಿಯಾಗಿ ಹರಿಯ ಬಂದಿರುವುದು ಗಮನಕ್ಕೆ ಬರುತ್ತದೆ.

ಹೀಗೆ ಹಿಂದಿನ ಸಾಹಿತ್ಯ ಘಟ್ಟಗಳಲ್ಲಿ ದಲಿತ ಧೋರಣೆ ಪರೋಕ್ಷವಾಗಿ ಮೂಡಿದ್ದು, ಅದು ನೇರ ಮತ್ತು ಪ್ರತ್ಯೇಕ್ಷವಾಗಿ ಕಾಣಸಿಕೊಂಡದ್ದು ೧೯೭೦ರ ದಶಕದ ಅನಂತರ. ಈ ಕಾಲ ಘಟ್ಟದಲ್ಲಿ ದಲಿತ ಸಾಹಿತ್ಯ

೧. ಪುರುಷೋತ್ತಮ ಬಿಳಿಮಲೆ : ಬಂಡಾಯ - ದಲಿತ ಸಾಹಿತ್ಯ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೫, ಪುಟ - ೭.

ಒಂದು ಸ್ಥಾನವನ್ನು ಪಡೆಯಿತು. ಅನೇಕ ಕಾವ್ಯ ಸಂಕಲನಗಳು, ಕತೆಗಳು, ಕಾದಂಬರಿಗಳು, ಆತ್ಮ ಕಥೆಗಳು ಸಾಹಿತ್ಯದ ಒಡಲು ಸೇರಿದವು. ದೇವನೂರು ಮಹಾದೇವರ 'ಒಡಲಾಳ', 'ಕುಸುಮಬಾಲೆ', 'ದ್ಯಾವನೂರು' ಕಾಥಸಂಕಲನ, ಸಿದ್ದಲಿಂಗಯ್ಯನವರ ಹೊಲೆ ಮಾದಿಗರ ಹಾಡು, ಮಾಲಗತ್ತಿಯವರ 'ಕಪ್ಪು ಕಾವ್ಯ', 'ಮೂಕನಿಗೆ ಬಾಯಿ ಬಂದಾಗ', 'ಕಾರ್ಯ', 'ಗೌರ್ನಮೆಂಟ್ ಬ್ರಾಹ್ಮಣ', ಮನಜ ಅವರ 'ಮಾಗಿ', 'ಜಲ', ಮುಳ್ಳೂರು ನಾಗರಾಜರವರ 'ನೆಲದ ಜೋಗುಳ', 'ಮರಣಮಂಡಲ ಮಧ್ಯದೊಳಗೆ', ಮೊಗಳ್ಳಿ ಗಣೇಶ. ಮುಡ್ನಕೂಡು ಚಿನ್ನಸ್ವಾಮಿ, ಎಚ್. ಗೋವಿಂದಯ್ಯ, ರಂಜಾನ್‌ದರ್ಗಾ, ಮುಂತಾದ ದಲಿತ ಸಾಹಿತಿಗಳಿಂದ ದಲಿತ ಸಾಹಿತ್ಯ ಶ್ರೀಮಂತವಾಯಿತು.

## ೨. ದಲಿತ ಸಾಹಿತ್ಯದ ಸ್ವರೂಪ ಮತ್ತು ಲಕ್ಷಣಗಳು

ದಲಿತ ಸಾಹಿತ್ಯದ ಸ್ವರೂಪ ಸಂಕೀರ್ಣವಾದುದು. ಇದು ದುಡಿವ ಸಮುದಾಯದ ಸಾಹಿತ್ಯ. ಇಲ್ಲಿ ಒಂದು ಪ್ರದೇಶದಲ್ಲಿ ಬದುಕುತ್ತಿರುವ ಶ್ರಮಿಕರ ಬೆವರಿನ ರೂಪಗಳಿವೆ. ಅವುಗಳ ಆಶಯ ನೆಲದ ಪರವಾಗಿವೆ. ಅಭಿವ್ಯಕ್ತಿ ಕ್ರಮಗಳು ಅಷ್ಟೆ, ಗದ್ಯ ಗಾಯನ, ಮತ್ತು ಪ್ರದರ್ಶನ ಮಾದರಿಗಳು ಆತ್ಮ ಪ್ರತ್ಯಯದ ಅನಿಸಿಕೆಗಳಾಗಿವೆ. ಬಳಸಿಕೊಂಡ ಭಾಷೆ, ರೂಢಿಸಿಕೊಂಡ ತಂತ್ರಗಳು ಮಾತು ಮತ್ತು ಮೌನಗಳ ಒಡಲಲ್ಲಿ ಹುಟ್ಟಿಕೊಂಡಿವೆ. ಅನಂತರ ಅಕ್ಷರ ಸಿಂಚನದ ಫಲವಾಗಿ ಹಲವು ಸ್ವರೂಪಗಳಲ್ಲಿ ಹಬ್ಬಿಕೊಂಡಿವೆ.

ಪ್ರಾಚೀನ ಹಾಗೂ ಮಧ್ಯಕಾಲೀನ ಕನ್ನಡ ಸಾಹಿತ್ಯದ ಒಡಲಲ್ಲಿ ಅನೇಕ ಬಂಡಾಯದ ನೆಲೆಗಳಿದ್ದವು. ಇವುಗಳನ್ನು ವಚನ ಸಾಹಿತ್ಯ ಸೂಫಿ ಸಾಹಿತ್ಯ ಅನುಭಾವ ಸಾಹಿತ್ಯದ ಆಶಯಗಳಲ್ಲಿ ಶೋಧಿಸಲು ಸಾಧ್ಯ. ಅದರಂತೆ ಬಹುತೇಕ ಜನಪದರ ಕಥನ, ಕಾವ್ಯ ಮತ್ತು ಮಹಾಕಾವ್ಯಗಳ ಅಂತರಂಗ ಶೋಷಿತ ಬದುಕಿನ ಸಂಕಥನಗಳೇ ಆಗಿವೆ. ಒಂದು ರೀತಿಯಲ್ಲಿ ಇವೆಲ್ಲಾ ಆಧುನಿಕ ಕನ್ನಡ ದಲಿತ ಸಾಹಿತ್ಯದ ಆಯಾಮಗಳಿಗೆ ಹಿನ್ನೆಲೆಯಾಗಿವೆ. ಈ ಹಿನ್ನೆಲೆ ವಿಶಾಲಾಗುತ್ತಿದೆ ಇಂದು ಕೂಡ. ಏಕೆಂದರೆ "ಆಕ್ರಮಣಕಾರಿಯಾದ ಜಾಗತೀಕರಣ ಮತ್ತು ಮೂಲಭೂತವಾದೀತನವನ್ನು ವಿರೋಧಿಸಲು ತೃತೀಯವರ್ಗದ ರಾಷ್ಟ್ರಗಳು ನಂಬಿರುವುದು ಈ ದುಡಿಯುವ ಸಮುದಾಯಗಳಲ್ಲಿನ ಮೂಲವನ್ನು"[೨] ಒಂದು ತರದಲ್ಲಿ ಇವೆಲ್ಲಾ ಬಂಡಾಯದ ಆಯುಧಗಳೇ ಆಗಿವೆ. ಪ್ರಸ್ತುತ ಕನ್ನಡ ದಲಿತ ಸಾಹಿತ್ಯಕ್ಕೆ ಮೂವತ್ತೆಂಟು ವರ್ಷಗಳು ತುಂಬಿದೆ. ಪ್ರಾರಂಭಕ್ಕೆ ಇದು ಬಂಡಾಯ ಸಾಹಿತ್ಯ ಸಂಘಟನೆಯೊಂದಿಗೆ ಗುರುತಿಸಿ ತನ್ನ ಅಸ್ತಿತ್ವ ಪಡೆದಿತ್ತು, ಆಗ ಇದರ ಸ್ವರೂಪ ದಲಿತ ಮತ್ತು ದಲಿತ್ರೇತರ ಸಾಹಿತಿಗಳಿಂದ ರೂಪುಗೊಂಡಿತ್ತು, ಆಗ ಆವತ್ತಿನ ಮಾತನ್ನು ದಲಿತ ಸಾಹಿತ್ಯ ಒಪ್ಪುವುದಿಲ್ಲ. ಏಕೆಂದರೆ ಈ ಮೂರುವರೆ ದಶಕಗಳ ದಲಿತ ಸಾಹಿತ್ಯದ ಕಾಲಘಟ್ಟವನ್ನು ವಿಂಗಡಿಸಿಕೊಳ್ಳುವುದರ ಮೂಲಕ ಸ್ವರೂಪವನ್ನು ಅಭ್ಯಾಸಿಸುವುದು ಉಚಿತವೆನಿಸುತ್ತದೆ. ಏಕೆಂದರೆ ಎಪ್ಪತ್ತು ಎಂಬತ್ತರ ದಶಕದ ಪ್ರೇರಣೆ ಪ್ರಭಾವ ಮತ್ತು ಒತ್ತಡಗಳು ವ್ಯಾಪಕವಾಗಿದ್ದವು. ಸಾಚಾ ಅನುಭವಗಳನ್ನು ಸಾಹಿತ್ಯವನ್ನಾಗಿಸುವ ಪ್ರಾಮಾಣಿಕ ಮನಸ್ಸುಗಳಿದ್ದವು. ಇಂಥ ಮನಸ್ಸಿನ ಸಾಹಿತಿಗಳಲ್ಲಿ ದಲಿತ ಮತ್ತು ದಲಿತೇತರ ಎಂಬ ಭಾವನೆಗಳು ಬಂದಿರಲಿಲ್ಲ, ಆದರೆ ಕಾಲಾನಂತರ ದಲಿತ ಮತ್ತು ದಲೀತೇತರ ಎಂಬ ಭಾವನೆಗಳು ಬಿಗಡಾಯಿಸಿ ಬಂಡಾಯದಿಂದ ದಲಿತರು ಬೇರ್ಪಟ್ಟುದ್ದು ಈಗ ಇತಿಹಾಸ.

---

೨. ಅರ್ಜುನ ಗೊಳಸಂಗಿ : ಕನ್ನಡದಲ್ಲಿ ದಲಿತ ಸಾಹಿತ್ಯ, ಮಮಂಗಳೂರು ವಿಶ್ವವಿದ್ಯಾನಿಲಯ, ೨೦೦೬, ಪುಟ - ೧೮.

ಆರಂಭಕ್ಕೆ ರಂಜಾನ್ ದರ್ಗಾ ಅವರು "ನಮಗೆ ಅಧಿಕಾರ ಸಿಕ್ಕರೆ ಪೋಲಿಸರನ್ನು ನ್ಯಾಯಾಧೀಶರನ್ನು ಮನುಷ್ಯರನ್ನಾಗಿ ಮಾಡುತ್ತೇವೆ. ಆಗ ಬಂದೂಕಿನ ಬಾಯಿಯಲ್ಲಿ ಗುಬ್ಬಿ ಗೂಡು ಕಟ್ಟುತ್ತವೆ" ಎಂದು ಹೇಳಿದ್ದರು. ಇದು ಬಂಡಾಯ ಸಾಹಿತ್ಯದ ಮುಖ್ಯ ಆಶಯ. ಆದರೆ ನಮ್ಮ ಜನರ ಕೈಗೆ ಇದುವರೆಗೂ ಅಧಿಕಾರ ನೀಡಲಿಲ್ಲ ಹಾಗಾಗಿ ದಲಿತರ ಶೋಷಣೆ ಮುಂದುವರಿಯುತ್ತಲೇ ಇದೆ. ಹಾಗೂ ಇನ್ನೂ ಗ್ರಾಮೀಣ ಕೃಪಾಂಕ ಪರ ತೀರ್ಪು ಬರಲೇ ಇಲ್ಲ. ಆದ್ದರಿಂದಲೇ ಬಂದೂಕಿನ ಬಾಯಿಯಲ್ಲಿ ಇನ್ನೂ ಗುಂಡುಗಳೇ ತುಂಬಿವೆ. ಗುಬ್ಬಿಗಳಾಗಲೀ ಗುಡುಗಳಾಗಲೀ ಕಾಣಿಸುತ್ತಿಲ್ಲ. ಅದಕ್ಕಾಗಿ ಬಿ. ಚಿನ್ನಸ್ವಾಮಿಯವರು.

"ಮಸೀದಿಗಳು ಚರ್ಚುಗಳಿಗೆ ಬಾಂಬು ಬೀಳದಿರಲಿ
ರೈಲು ಬೋಗಿಗಳಲ್ಲಿ ಆರ್.ಪಿ.ಎಕ್ಸ್ ಟುಸ್ಸೆನ್ನಲಿ,
ಸಾಧು ಸನ್ಯಾಸಿಗಳ ಮುಖವಾಡಗಳು ಕಳಚಿ ಬೀಳಲಿ
ಕಾಡುಗಳ್ಳರು ಕಂಬಿ ಎಣಿಸಲಿ
ಅಕ್ಕ ತಂಗಿಯರು ಯಲ್ಲಮ್ಮನ ಹೆಸರಲಿ ಬೆತ್ತಲಾಗದಿರಲಿ
ಬತ್ತಿ ಹೋದ ಹೊಟ್ಟೆಗಳಿಗೆ ಕಾಳು, ರೊಟ್ಟಿಸಿಗಲಿ

ಎಂದು ಹಂಬಲಿಸುತ್ತಾರೆ. ಇದು ಕವಿಯ ವೈಯಕ್ತಿಕ ಆಶಯ ಅಷ್ಟೇ ಅಲ್ಲ ಇಡೀ ದಲಿತ ಸಾಹಿತ್ಯದ ಆಶಯವೂ ಕೂಡ. ಇದನ್ನು ದಲಿತ ಕಾವ್ಯ, ಕತೆ, ಕಾದಂಬರಿ, ನಾಟಕ ಎಲ್ಲಾ ರೂಪ ಗಳಿಂದಲೂ ಗ್ರಹಿಸಬಹುದು.

ಸಿದ್ದಲಿಂಗಯ್ಯನವರು ತಮ್ಮ 'ಕಪ್ಪು ಕಾಡಿನ ಹಾಡು' (೧೯೮೩) ಸಂಕಲನದಲ್ಲಿ

"ಗುಡಿಸಲಲಿ ಅರಳುವ ಗುಲಾಬಿ
ನಕ್ಷತ್ರ ನನ್ನ ಕವನ
ಕತ್ತಲೆಯಲ್ಲಿ ಕಾಣುವ ಬೆಳಕು
ಬಂಡಾಯದ ಈ ಕವನ " [೩]

ಎಂದಿದ್ದರು. ಇದು ಗುಡಿಸಲಲ್ಲು ಗುಲಾಬಿಯನ್ನೂ, ಕತ್ತಲಲ್ಲು ಬೆಳಕನ್ನು ಹುಡುಕುವ ಆಶಯದ್ದು. ಇದು ಮೆರವಣಿಗೆ ಸಂಕಲನದ ಕನವರಿಕೆ ಕವಿತೆಯಲ್ಲೂ ಮುಂದುವರೆಯುತ್ತದೆ. ಅವರು ನನ್ನ ಕವಿತೆ ಕನವರಿಸುತ್ತದೆ, ಹಂಬಲಿಸುತ್ತದೆ, ಹಾರೈಸುತ್ತದೆ, ಮರುಗುತ್ತದೆ, ಕೊನೆಗೆ ನಿಶಬ್ದವಾಗುತ್ತದೆ ಎಂದಿದ್ದಾರೆ. ಇಲ್ಲಿ ಕನವರಿಕೆ, ಹಂಬಲಿಕೆ, ಹಾರೈಕೆ, ಮರುಗುವಿಕೆಗಳು ದಲಿತ ಬದುಕಿನ ನೋವಿನ ನಿವೇದನೆಗಳಾಗಿವೆ. ಕಪ್ಪು ಜನರ ಕಷ್ಟ ನಷ್ಟಗಳಲ್ಲಿ ಬಿಚ್ಚಿಕೊಳ್ಳುವ ಸಿದ್ದಲಿಂಗಯ್ಯ ಅವರ ಈ ಕಾವ್ಯದ ಸ್ವರೂಪ ಅರ್ಥ ಪೂರ್ಣವಾಗಿದೆ. ಅದರಂತೆ ಇವರ ಕಾವ್ಯಕ್ಕೆ ಇನ್ನೆರಡು ಸ್ವರೂಪಗಳಿವೆ. ಒಂದು ತನ್ನವರಿಗಾಗಿ ಹಂಬಲಿಸುವುದು; ಇನ್ನೊಂದು ಇತರರಿಗಾಗಿ ಆಕ್ರೋಶತಾಳವುದು. ನನ್ನ ಜನ ನಿನ್ನ ದಿನ ಬೆಟ್ಟದಂತೆ ಬಂದರೂ ಎನ್ನುವಲ್ಲಿ ತನ್ನವರ ಬಗೆ ಹಂಬಲವಿದೆ. "ಇಕ್ರಲಾ ಒದಿರ್ಲಾ ಈ ನನ್ ಮಕ್ಳ ಚರ್ಮ ಎಬ್ರಲಾ" ಎನ್ನುವಲ್ಲಿ ಇತರರ ಬಗ್ಗೆ ಆಕ್ರೋಶವಿದೆ. ಅಂದರೆ ದಲಿತ ಕಾವ್ಯ ಏಕ ಕಾಲಕ್ಕೆ ತನ್ನನ್ನೂ, ತನ್ನವರನ್ನೂ ಹುರಿದುಂಬಿಸಿಕೊಳ್ಳುತ್ತಲೇ ಇತರರ ಬಗ್ಗೆ ಎಚ್ಚರಿಕೆ

---

೩. ಸಿದ್ದಲಿಂಗಯ್ಯ : ಮೆರವಣಿಗೆ, ಅಂಕಿತ ಪುಸ್ತಕ, ಬೆಂಗಳೂರು, ೨೦೦೦, ಪುಟ - ೧೧೯.

ಹೊಂದಿದೆ. ಆದರೂ ಅನೇಕ ಆಕ್ರಮಣಗಳಲ್ಲಿ ನಲುಗಿ ನಜ್ಜು ಗುಜ್ಜಾಗಿರುವ ಸಂದರ್ಭಗಳೇ ಹೆಚ್ಚು. ಆಗ ಚೆನ್ನಣ್ಣವಾಲಿಕಾರ ಅವರ "ಯಾವ ಅಕ್ಷರದಿಂದ ಬರೆದು ತೋರಾಲಯ್ಯ ನನ್ನ ಜನಗಳಿಗಾದ ಎದಿಯ ಬ್ಯಾನಿ"[೪] ಎನ್ನುವ ಮಾತು ಸ್ಪಷ್ಟವಾಗುತ್ತದೆ. ಇಲ್ಲಿ ದಲಿತ ಕಾವ್ಯ ಹೇಳಲು ಉದ್ದೇಶಿಸಿರುವ ತನ್ನವರ ಅಸಾಹಯಕತೆ ತನ್ನವರಿಗಾದ ಅವಮಾನಗಳ ಸ್ವರೂಪ ಎಂಥದ್ದು ಎಂದು ತಿಳಿಸುತ್ತವೆ.

ಹೀಗೆ ದಲಿತ ಕಾವ್ಯದ ಸ್ವರೂಪ ಪರಂಪರೆಯನ್ನು ಪುನರ್ ಅವಲೋಕಿಸುವಂತದ್ದು. ಪರಂಪರೆಯಲ್ಲಿ ಚಿತ್ರವಾಗಿರುವ ದ್ರೋಣ, ಅರ್ಜುನ, ಏಕಲವ್ಯ, ಕರ್ಣರಲ್ಲಿ ಏಕಲವ್ಯ, ಕರ್ಣ, ಶಂಭೂಕ, ಅಹಲ್ಯೆ ರೇಣುಕೆಯರ ಆಕೃತಿಗಳನ್ನು ತನಗೆ ಮೂಲ ನೆಲೆಯಾಗಿ, ಚೈತನ್ಯದ ಸೆಲೆಯಾಗಿ ತೆಗೆದುಕೊಂಡಿದೆ. ಅದೇ ಸಂದರ್ಭದಲ್ಲಿ ದ್ರೋಣ ಜಮದಗ್ನಿ ಅರ್ಜುನ, ಗೌತಮರ ಆಕೃತಿಗಳನ್ನು ಚಿತ್ರಿಸಿದೆ. ಇದೇ ರೀತಿಯ ಪುರಾಣ ಭಂಜನದ ಪರಂಪರೆಯನ್ನು ಪ್ರಶ್ನಿಸುವ ಸ್ವರೂಪವನ್ನು ಮನಜ ಅವರ 'ಅಪ್ಪ ಹೇಳಿದ ಉಪ್ಪನೀರ ಕಥೆ', ಮುಳ್ಳೂರು ನಾಗರಾಜು ಅವರ 'ನೆಲದ ಜೋಗುಳ' ಮುಂತಾದ ಕವಿತೆಗಳಲ್ಲಿ ಕಾಣಬಹುದು. ಈ ವರೆಗಿನ ದಲಿತ ಕಾವ್ಯ ಸಿಟ್ಟಿನ ಸ್ವರೂಪದ್ದು. ಇದನ್ನು ಮುಂದೆ ವಿವರವಾಗಿ ವಿವಿಧ ಪ್ರಕಾರಗಳ ಸಮಾಲೋಕನರಲ್ಲಿ ಚರ್ಚಿಸಲಾಗುವುದು. ಅಂತೆಯೇ ದಲಿತ ಕಥಾ ಸಾಹಿತ್ಯದಲ್ಲಿ ದೇವನೂರು ಮಹದೇವ ಅವರ 'ಒಡಲಾಳ', 'ಕುಸುಮ ಬಾಲೆ', 'ದ್ಯಾವನೂರು', 'ಮನಜ' ಅವರ 'ಮಾಗಿ', 'ಜಲ', ಅರವಿಂದ ಮಾಲಗತ್ತಿ ಅವರ 'ಕಾರ್ಯ', ಗೀತನಾಗಭೂಷಣ್ ಅವರ 'ಬದುಕು' ಮುಂತಾದ ಸಾಹಿತ್ಯ ಸ್ವರೂಪವವನ್ನು ಹಾಗು ಆತ್ಮಕಥೆಗಳಾದ, 'ಗೌರ್ಮೆಂಟ್ ಬ್ರಾಹ್ಮಣ', 'ಮಣೆಗಾರ', 'ಊರುಕೇರಿ', 'ಮನವಿಲ್ಲದವರ ಮಧ್ಯೆ', 'ಕತ್ತಲೆ ಬೆಳದಿಂಗಳು'ಗಳನ್ನು ಹಾಗೆಯೆ ದಲಿತ ನಾಟಕಗಳ ಸ್ವರೂಪವನ್ನು ಮುಂದೆ ಚರ್ಚಿಸಲಾಗುವುದು.

**ದಲಿತ ಸಾಹಿತ್ಯದ ಲಕ್ಷಣಗಳು**

ಕನ್ನಡ ಸಾಹಿತ್ಯದ ಮುಖ್ಯ ಘಟ್ಟಗಳಲೊಂದಾದ ದಲಿತ ಸಾಹಿತ್ಯದ ಲಕ್ಷಣಗಳನ್ನು ಕುರಿತು ಬರೆಯುವುದೆಂದರೆ ಕಡಲನ್ನು ಕನ್ನಡಿಯಲ್ಲಿ ಹಿಡಿಯುವ ಸಾಹಸಹವನ್ನು ಮಾಡಿದಂತೆ. ಏಕೆಂದರೆ ಕತ್ತಲನಾಡಿನ ಜನತೆ ಈಗ ಮೂಡಿಸಿರಿರುವ ಲೇಖನಿ ಅಲ್ಪವಾದರೂ ಕಾಯಕಲ್ಪವಾಗಿದೆ. ಸಾಹಿತ್ಯದ ಮಜಲುಗಳು ಬೆರೆಗಾಗುವಂತೆ, ಬೆರಳೆಣಿಕೆಯ ಲೇಖಕರ ಬರೆಹಗಳೇ ಒಂದು ಕಾಲಕ್ಕೆ ಬಿರುಗಾಳಿ ಎಬ್ಬಿಸಿದ್ದವು. ಸಾಹಿತ್ಯದಲ್ಲಿ ಇನ್ನು ಅಲ್ಪವಿರಾಮವೇ ಬಿಟ್ಟಿರಲಿಲ್ಲ ಆಗಲೇ ಪ್ರತಿಧ್ವನಿಗಳ ಅಲೆ ಮುಳಗುತ್ತಿತ್ತು. ಆದರೆ ಪ್ರಸ್ತುತ ದಲಿತ ಸಾಹಿತ್ಯ ಚಲನ ಶೀಲವಾಗಿಲ್ಲ. ಆದರೂ ವಿಮರ್ಶೆಯ ಕಾರ್ಯ ನಡೆಯುತ್ತದೆ.

"ದಲಿತ ಸಾಹಿತ್ಯದ ಮೊದಲ ತಲೆಮಾರಿನ ಬರಹಗಾರರ ಬರವಣಿಗೆಯಲ್ಲಿ ವೈವಿಧ್ಯತೆಯಿದೆ. ಒಬ್ಬರು ಬರೆದಂತೆ ಮತ್ತೊಬ್ಬರು ಬರೆದಿಲ್ಲ. ಪ್ರತಿಯೊಬ್ಬರು ತಮ್ಮದೇ ಆದ ಸಾಹಿತ್ಯಿಕ ನಡಿಗೆಯಲ್ಲಿ ಗುರುತಿಸಿಕೊಂಡಿದ್ದಾರೆ."[೫] ಹೀಗಾಗಿ ಹಿಡಿಯುವಷ್ಟು ಸಾಹಿತ್ಯವಿದ್ದರೂ ಅದಕ್ಕಿಂತ ಹೆಚ್ಚಿನ ಮಟ್ಟದಲ್ಲಿ ಚರ್ಚೆ ನಡೆದಿದೆ. ದಲಿತ ಸಾಹಿತ್ಯದ ಎಲ್ಲಾ ಲಣಗಳನ್ನು ವಿವೇಚಿಸುವುದು ಅಸಾಧ್ಯ. ಅದರಲ್ಲೂ ಗದ್ಯದಿಂದ ಪದ್ಯಕ್ಕೂ, ಕಥೆಯಿಂದ ಕಾದಂಬರಿಗೂ ಲಕ್ಷಣ ಮತ್ತು ಸ್ವರೂಪಗಳಲ್ಲಿ ವ್ಯತ್ಯಾಸವಿದೆ. ಅವೆಲ್ಲದರ ಪ್ರತ್ಯೇಕ ಮತ್ತು ದೀರ್ಘವಾದ ಚರ್ಚೆ ಈ ಕಿರು ನಿಬಂಧದಲ್ಲಿ ಕಷ್ಟ ಸಾಧ್ಯ. ಆದ್ದರಿಂದ ಕೆಲವುಗಳನ್ನು ಮಾತ್ರವಷ್ಟೇ ಪಟ್ಟಿಮಾಡಬಹುದು.

೪. ಚೆನ್ನಣ್ಣ ವಾಲಿಕಾರ : ಸಮಗ್ರ ಕವನಗಳು, ನೆಲಮನೆ ಪ್ರಕಾಶನ, ಮೈಸೂರು, ಪುಟ - ೨೧.
೫. ಅರವಿಂದ ಮಾಗಲತ್ತಿ : ದಲಿತ ಸಾಹಿತ್ಯ ಪ್ರವೇಶಿಕೆ, ಶೈಲ ಪ್ರಕಾಶನ, ಮುದ್ದೇಬಿಹಾಲ, ೧೯೯೭, ಪುಟ - ೨೩.

ಸಿಟ್ಟು, ಅಬ್ಬರ, ರೊಚ್ಚು ಆವೇಶ ಆರಂಭದ ನಾಡಿಗಳಾಗಿದ್ದವು. ತಾತ್ವಿಕವಾಗಿ ಪರಿಶೀಲಿಸಿದರೆ ಸಾಹಿತ್ಯಕ್ಕೆ ಇವೇ ಆಭರಣಗಳಲ್ಲ. ಆದರೆ ೧೯೭೦ರ ಸಾಂಸ್ಕೃತಿಕ ಸಂದರ್ಭದಲ್ಲಿ ಈ ರೀತಿಯ ಬರವಣಿಗೆ ಅವಶ್ಯವೂ, ಅನಿವಾರ್ಯವೂ ಆಗಿತ್ತು. ಇಲ್ಲಿಯ ಸಿಟ್ಟು ಆವೇಶಕ್ಕೂ ಅರ್ಥವಿದೆ. ಅದು ಶತಶತಮಾನಗಳ ನೋವಿನಾಳದಿಂದ ಹೊರಟದ್ದು. ಅದಕ್ಕೆ ಐತಿಹಾಸಿಕ ಮಹತ್ವವಿದೆ. ಹೀಗೆ ಆರಂಭದಲ್ಲಿ ಇದನ್ನು ಒಂದು ಲಕ್ಷಣವೆಂದೇ ಪರಿಗಣಿಸಲಾಯಿತು. ಆದರೆ ಇಂದು ದಲಿತ ಕಾವ್ಯದ ನಡಿಗೆ ಬೇರೆಯಾಗಿದೆ. "ನಖದ ಪರಿಭಾಷೆಯನ್ನು ಮೀರಿ ಹಸ್ತ ಸ್ಪರ್ಶದ ಪರಿಭಾಷೆಯಲ್ಲಿ ಸಾಹಿತ್ಯವಾಗಿ ಹೊರಳಿ ನಿಂತಿದೆ."[೬] ಆವೇಶದ ಅಬ್ಬರದ ಬರವಣಿಗೆ ಇದ್ದಾಗ ವಾಚಾಳಿತನ ಅನಿವಾರ್ಯವಾದರೂ ಅನುಭವ ಆದರೊಂದಿಗೆ ಮಡುಗಟ್ಟಿ ನಿಂತಿದ್ದರಿಂದ ವಾಚ್ಯವೂ ಕೂಡಾ ಗೌಣವಾಗಿದ್ದನ್ನು ಕಾಣುತ್ತೇವೆ.

ಗೇಯತೆಯನ್ನು ಕಳೆದುಕೊಂಡಿದ್ದ ಕನ್ನಡ ಕಾವ್ಯಕ್ಕೆ ಗೇಯತೆಯ ಮೂಲಕ ಹೊಸ ಚೈತನ್ಯವನ್ನು ದಲಿತ ಸಾಹಿತ್ಯ ತಂದು ಕೊಟ್ಟಿತು. ಈ ಗೇಯತೆಯಧ್ವನಿ ಆಲಾಪಗಳು ನವೋದಯಕ್ಕಿಂತ ಭಿನ್ನವಾದವು. ಅಲ್ಲಿಯ ಲಯದ ನಾಜೂಕಿನ ನಡಿಗೆ ಇಲ್ಲಿ ಇಲ್ಲದೆ ಹೋದರೂ ಕೇಳುಗರ ರೋಮಗಳನ್ನು ಕ್ರಿಯಾಶೀಲವಾಗಿಸುವ ಸತ್ವ ವಿರುವಂಥದು. ಇಂಥ ಗೇಯತೆ ಪ್ರಗತಿಶೀಲರಿಗೆ ದಕ್ಕದಿರುವುದರಿಂದಲೇ ಅಲ್ಲಿಯ ಕಾವ್ಯ ಕಳಪೆ ಮತ್ತು ಗೌಣವಾದುದ್ದು ಎನ್ನಬಹುದು. ದಲಿತ ಕಾವ್ಯ ಜಾನಪದ ವಸ್ತು ಲಯಗಾರಿಕೆಯನ್ನು ಬಳಸಿಕೊಂಡಿದ್ದೇ ಈ ಯಶಸ್ಸಿಗೆ ಕಾರಣವಾಗಿದೆ.

ಸಾಂಸ್ಕೃತಿಕ ಬದುಕಿನ ಸ್ಥಿತ್ಯಂತರಗಳನ್ನು ದಲಿತ ಸಾಹಿತ್ಯ ತುಂಬ ಸಾಮರ್ಥವಾಗಿ ಹಿಡಿದಿಟ್ಟವೆ. ಇದರ ಜೊತೆಗೆ ಸಾಂಸ್ಕೃತಿಕ ಮೌಲ್ಯಗಳನ್ನು ಗೌರವಿಸುವುದು ಮಾನವ ಬದುಕಿನ ವಿಕಾರ ಭಾವನೆಗಳನ್ನು ವಿರೋಧಿಸುವುದು, ದಾಸ್ಯದ ಭಾವದಿಂದ ಹೊರತರುವುದು ಇಂಥ ಗುಣಗಳೆಲ್ಲ ಪದೇ ಪದೇ ಗೋಚರವಾಗುತ್ತವೆ. ಹಾಗೂ ಶಿಕ್ಷಣಕ್ಕೆ ಎಲ್ಲಿಲ್ಲದ ಮಹತ್ವ ಸ್ಥಾನ ದೊರಕಿದೆ.

ದಲಿತ ಸಾಹಿತ್ಯದ ಲಕ್ಷಣದಲ್ಲಿ ಮುಖ್ಯವಾದುದು ಪೌರಾಣಿಕ ಪ್ರತಿಕೆಗಳ ಮೂರ್ತಿ ಭಂಜನೆಯ ಕೆಲಸ ಒಂದೆಡೆ ನಡೆದರೆ ಮತ್ತೊಂದೆಡೆ ಪೌರಾಣಿಕ ತತ್ವಗಳ ಪುನರ್ ಸೃಷ್ಟಿಯೂ ನಡೆದಿದೆ. ರಾಮ, ದ್ರೋಣ, ಜಮದಗ್ನಿ, ಅರ್ಜುನನಂಥ ಪಾತ್ರಗಳು ಮೂರ್ತಿ ಭಂಜನ ಕ್ರಿಯೆಗೆ ಸಿಲುಕಿದರೆ, ಏಕಲವ್ಯ ಕರ್ಣ, ತ್ರಿಶಂಕು, ಶಂಭೂಕ ಇಂಥ ಪಾತ್ರಗಳು ಪುನರ್ ಸೃಷ್ಟಿಗೆ ಒಳಗಾಗಿವೆ. ವಚನ ಸಾಹಿತ್ಯದ ಜಾಡನ್ನು ಕೆಲವರು ಅನುಕರಿಸಿದರೆ ಇನ್ನು ಕೆಲವರು ನವ್ಯದ ಶೈಲಿಯನ್ನೇ ಅನುಕರಿಸಿದ್ದಾರೆ. ಧರ್ಮ - ಶಾಸ್ತ್ರ - ಪುರಾಣಗಳ ಪುನರ್ ವಿಮರ್ಶೆಯೇ ಕಾವ್ಯದಲ್ಲಿ ನಡೆದಿದೆ. ದೇವರ ಜೀವನ ಮಟ್ಟ ಪಶುಪಕ್ಷಿಗಳಿಗಿಂತ, ನಾಯಿ - ಹಂದಿಗಳಿಗಿಂತ ಕೆಳಗಿದೆ ಎನ್ನುತ್ತ ಸಮಸ್ಯೆಯ ಮೂಲ ಬೇರುಗಳನ್ನು ಕೆದಕಿದ್ದಾರೆ.

ಬುದ್ಧ, ಅಂಬೇಡ್ಕರ್, ಬಸವ, ಮಾರ್ಕ್ಸ್ ಇಂಥವರ ಚಿಂತನೆಗಳು ಪ್ರೇರಕ ಶಕ್ತಿಯಾಗಿ ಕೆಲಸ ಮಾಡಿದ್ದು ವ್ಯಕ್ತಿ ನಿಷ್ಠವಾದ ಕವನಗಳು ನೀರಾಗಿ ಹರಿದಿವೆ. ದೇಶದ ನೆಲ - ನಾಣ್ಯ - ಬಾವುಟ, ಇಂಥವೆಲ್ಲಾ ಟೀಕೆಗೆ ಒಳಗಾಗಿದೆ. ಅನ್ನ - ಬಡತನ, ಬೆಲೆಯಿಲ್ಲದ ದುಡಿತ, ಪ್ರಾಸಂಗಿಕ ಹಾಗೂ ಘಟನಾತ್ಮಕ ವಸ್ತು ಇಂಥವೆಲ್ಲಾ ಸಾಮಾನ್ಯವಾಗಿ ಕಾವ್ಯದಲ್ಲಿ ಕಂಡು ಬಂದರೂ ಪ್ರಸ್ತುತ ದಲಿತ ಕಾವ್ಯದ ನಡಿಗೆ ಋಷಿ ಕಾವ್ಯದ

೬. ಅರವಿಂದ ಮಾಗಲತ್ತಿ : ದಲಿತ ಸಾಹಿತ್ಯ ಪ್ರವೇಶಿಕೆ, ಶೈಲ ಪ್ರಕಾಶನ, ಮುದ್ದೇಬಿಹಾಲ, ೧೯೯೬, ಪುಟ - ೧೫.

ದಿಕ್ಕಿನೆಡೆಗೆ ಹೆಜ್ಜೆ ಹಾಕಿರುವ ಲಕ್ಷಣಗಳು ಗೋಚರವಾಗುತ್ತವೆ. ಈ ದಿಕ್ಕಿನೆಡೆಗೆ ಸಾಗಲು ಅವರ ಆರಂಭದ ವಸ್ತುನಿಷ್ಠ ಕಾವ್ಯ ಅಥವಾ ಸಮಷ್ಟೀಯ ಕಾವ್ಯದ ನಡಿಗೆಯೊಂದಿಗೆ ಬತ್ತದ ಅನುಭವದ ಗುಣ ಮನೆ ಮಾಡಿರುವುದೇ ಕಾರಣಾವಾಗಿದೆ. ಆದರೆ ದಲಿತ ಕವಯತ್ರಿಯರ ಕೊರತೆ ಈ ಸಂದರ್ಭದಲ್ಲಿ ಎದ್ದು ಕಾಣುತ್ತದೆ. ಇಲ್ಲಿ ವ್ಯಕ್ತವಾದ ದಲಿತ ಕಾವ್ಯ ದಲಿತತ್ವದ ನೆಲೆಯಿಂದ ಗುರುತಿಸುವುದಕ್ಕಿಂತ ಮಹಿಳೆಯ ನೆಲೆಯಿಂದಲೇ ಪರಿಶೀಸಲು ಯೋಗ್ಯವಾಗಿದೆ.

ದಲಿತ ಸಾಹಿತ್ಯದ ಕೇಂದ್ರಭಾವ, ವರ್ಣ ಮತ್ತು ಜಾತಿ ವ್ಯವಸ್ಥೆಯಿಂದ ಕೂಡಿದ ಒಬ್ಬರನ್ನೊಬ್ಬರ ಮೇಲೆ ನಿಂತ ಗೋಪುರಾಕಾರದ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಪ್ರಶ್ನಿಸುವುದು. ಹೀಗೆ ಪ್ರಶ್ನಿಸುವಲ್ಲಿಯೇ ಭಿನ್ನ ರೀತಿಯ ಅಭಿವ್ಯಕ್ತಿಗಳಿವೆ. ಆದರೆ ಎಲ್ಲಾ ಅಭಿವ್ಯಕ್ತಿಗಳಲ್ಲಿ ಮಾನವೀಯತೆಯೇ ಮನೆ ಮಾಡಿಕೊಂಡು ನಿಂತಿದೆ. ಆವೇಶ, ಆಸ್ಫೂರ್ತತೆ, ವಿಡಂಬನ ಸ್ವರೂಪದ ಅಭಿವ್ಯಕ್ತಿಯೇ ಕೇಂದ್ರವಾಗಿದ್ದು ಪರಂಪರಾಗತ ಮೌಢ್ಯದ ಮೌಲ್ಯಗಳನ್ನು ಅನಾದರಣೆಯಿಂದ ಕಾಣುವುದು ಗಮನಕ್ಕೆ ಬರುತ್ತದೆ. ಪ್ರತಿಭಟನೆಗಿಂತ ಅಸಹಾಯಕ ಗುಣವೇ ಪ್ರಧಾನವಾಗಿ ಕಂಡು ಬರುತ್ತದೆ. ಅಸ್ಪೃಶ್ಯತೆಯ ನೋವಿನ ವಿವಿಧ ಮಜಲುಗಳನ್ನು ಬಿಚ್ಚಿ ತೋರಿಸುತ್ತಾ ಎದುರಾಳಿಯ ಮನಸ್ಸನ್ನು ಕಲಕುವ ಆತ್ಮ ವಿಮರ್ಶೆಗೆ ಹಚ್ಚುವ ವಸ್ತುವಿನ ಆಯ್ಕೆ ಮತ್ತು ಬರವಣಿಗೆಯ ಶೈಲಿ ಇಲ್ಲಿ ಪ್ರಧಾನವಾಗಿದೆ. ನೇರ ಪ್ರತಿಭಟನೆ ಎನ್ನುವುದು ಕಾವ್ಯದಲ್ಲಿ ವ್ಯಕ್ತವಾಗಿದೆ. ಆದರೆ ಈ ರೀತಿಯ ಪ್ರತಿಭಟನೆ ಗದ್ಯದ ಬರವಣಿಗೆಯಲ್ಲಿಲ್ಲ. ಇಲ್ಲಿನ ಪಾತ್ರಗಳು ಆವೇಶದ ಸ್ವರೂಪದವೂ ಅಲ್ಲ. ತೀರಾ ನಿಧಾನ ಗತಿಯ ಸ್ವರೂಪದವೂ ಅಲ್ಲ ಎರಡರ ಸಮನ್ವಯದಿಂದಾದವು.

ವರ್ಗ ಸಮಸ್ಯೆ ಮೇಲುನೋಟಕ್ಕೆ ಗೋಚರವಾದರೂ ಮುಂದುವರೆದು ದೇಶೀ ಸಮಸ್ಯೆಗಳಿಗೆ ಸ್ಪಂದಿಸುವಗುಣವನ್ನು ಕಾಣುತ್ತೇವೆ. ಜಮಿನ್ದಾರಿ ವರ್ಗ ಪುರೋಹಿತಶಾಹಿ ವರ್ಗಕ್ಕಿಂತ ಮಿಗಿಲಾಗಿ ವರ್ಣ ಮತ್ತು ಜಾತಿ ಸಂಘರ್ಷವೇ ಬರವಣಿಗೆಯಲ್ಲಿ ಪ್ರಧಾನವಾಗಿ ಬದುಕಿನ ಮಜಲುಗಳು ಅನಾವರಣಗೊಳ್ಳುತ್ತವೆ. ಪಿತೃ ಪ್ರಧಾನ ಕುಟುಂಬ ವ್ಯವಸ್ಥೆ ಇದ್ದಾಗಲೂ, ಹೆಣ್ಣೇ ಪ್ರಧಾನ ಪಾತ್ರ ವಹಿಸುವುದು. ಮೊದಲ ತಲೆಮಾರಿನ ಅಕ್ಷರಸ್ಥರ ಬಯಕೆ - ಬೇಡಿಕೆಗಳನ್ನು ಅರಸುವುದು, ಪ್ರತಿಭಟನೆಗಿಂತ ಸಾಂಸ್ಕೃತಿಕ ಬದುಕೇ ಕೇಂದ್ರವಾಗಿದ್ದು ಕಂಡು ಬರುತ್ತದೆ. ನಗರದ ಬದುಕಿಗಿಂತ ಗ್ರಾಮೀಣ ಬದುಕೇ ಗದ್ಯದ ಬರವಣಿಗೆಯಲ್ಲಿ ತುಂಬಿಕೊಂಡಿದೆ. ವರ್ಣ ಸಂಕರಕ್ಕಾಗಿ ಇಲ್ಲಿಯ ಬರವಣಿಗೆ ಹಾತೊರೆಯುತ್ತದೆ. ಸಾಂಸ್ಕೃತಿಕ ಸಂಘರ್ಷ ಮತ್ತು ಬದಲಾವಣೆಗಳನ್ನು ನಿರೀಕ್ಷಿಸುತ್ತಿದ್ದು, ನಾವು ಶೋಷಣೆಗೆ ಒಳಗಾದವರು ಎಂಬ ಭಾವವನ್ನು ಹೆಜ್ಜೆ ಹೆಜ್ಜೆಗೂ ಮೂಡಿಸುತ್ತದೆ. ಹಸಿವು, ಕಳ್ಳತನ, ಬಡತನ, ಆಂತರಿಕ ಕಲಹ, ಇಂಥವೆಲ್ಲಾ ಎದ್ದು ಕಂಡರೂ, ಬಡತನದ ದಾರಿದ್ರ್ಯ ಬೆನ್ನುಹತ್ತಿದಾಗ, ಸಮಾಜದಲ್ಲಿ ಅಸಮಾನತೆ ನೆಲೆಯೂರಿದಾಗ, ಕಳ್ಳತನ ಸಹಜವೆಂಬ ಧ್ವನಿಯನ್ನು ಮುಂದಿಡುತ್ತದೆ. ದಲಿತರಲ್ಲಿಯೇ ಇರುವ ನೈತಿಕ ಪರಿಕಲ್ಪನೆಯನ್ನು ಎತ್ತಿ ಹಿಡಿಯಲಾಗಿದೆ.

ಹೀಗೆ ದಲಿತ ಸಾಹಿತ್ಯವು ತನ್ನದೇ ಆದ ಲಕ್ಷಣಗಳನ್ನು ಮೈಗೂಡಿಸಿಕೊಂಡು ರಚನೆಯಾಗಿದ್ದು, ಅವುಗಳಿಗೆ ಸಾರ್ಥಕತೆಯನ್ನು ತಂದು ಕೊಡುತ್ತದೆ.

## ೩. ದಲಿತ ಸಾಹಿತ್ಯದ ಪ್ರೇರಣೆ - ಪ್ರಭಾವಗಳು

ಒಂದು ನಿರ್ದಿಷ್ಟ ಸಾಹಿತ್ಯ ಪರಂಪರೆಯು ತನ್ನ ಸಾಧ್ಯತೆಗಳನ್ನು ತೀರಿಸಿಕೊಂಡು ಜಡವಾಗಿ ಹೋಗುವ ಹೊತ್ತಿಗೆ ಇನ್ನೊಂದು ಸಾಹಿತ್ಯ ಪರಂಪರೆಯ ಉಗಮಕ್ಕೆ ಕಾರಣವಾದ ಅಂಶಗಳನ್ನೂ ತನ್ನ ಒಡಲಲ್ಲಿ ಧರಿಸಿಕೊಂಡಿರುತ್ತದೆ. ಇದರ ಜೊತೆಗೆ ಅನ್ಯ ದೇಶದ, ಅನ್ಯ ಕಾಲದ, ಅನ್ಯ ಶಿಸ್ತಿನ ಹತ್ತು ಹಲವು ಸಂಗತಿಗಳು ಹೊಸ ಸಾಹಿತ್ಯದ ಉಗಮಕ್ಕೆ ಕಾರಣವಾಗುತ್ತವೆ. ಈ ಮಾತುಗಳು ಸಾಹಿತ್ಯದ ಅನನ್ಯತೆಯನ್ನು ಪ್ರಶ್ನಿಸುವುದಿಲ್ಲ. ಬದಲಾಗಿ ಸಾಹಿತ್ಯದ ಅನನ್ಯತೆಗೆ ಕಾರಣವಾದ ಸೃಜನಶೀಲತೆಯ ನೆಲೆಗಳನ್ನು ಅರ್ಥೈಸುವುದಕ್ಕೆ ಸುಭದ್ರವಾದ ಒಂದು ನೆಲೆಗಟ್ಟನ್ನು ಒದಗಿಸುತ್ತದೆ. ಶಾಂಥಿನಾಥ ದೇಶಾಯಿಯವರು ಗುರುತಿಸಿದಂತೆ "ಸೃಜನಾತ್ಮಕ ಪ್ರಭಾವದ ಸಂದರ್ಭದಲ್ಲಿ ಲೇಖಕನ ಪ್ರತಿಭೆ ತನ್ನ ಸ್ವಂತಿಕೆಯನ್ನು ಕಳೆದುಕೊಳ್ಳುವುದಿಲ್ಲ. ತದ್ವಿರುದ್ಧವಾಗಿ ಹೊರಗಿನ ಪ್ರಭಾವದಿಂದ ಲೇಖಕ ತನ್ನ ತನವನ್ನು ಶೋಧಿಸುತ್ತಾನೆ ರೂಪಿಸುತ್ತಾನೆ". ಒಂದು ಅತ್ಯುತ್ತಮ ಸಾಹಿತ್ಯ ಪ್ರಕಾರವಾಗಲೀ ಸಾಹಿತ್ಯ ಕೃತಿಯಾಗಲೀ ಸಾಹಿತ್ಯಿಕ ಮತ್ತು ಸಾಹಿತ್ಯೇತರ ಅಂಶಗಳಿಂದ ಯಾಂತ್ರಿಕವಾಗಿ ಪ್ರಭಾವಿತವಾಗುವುದೂ ಇಲ್ಲ. ಬದಲಾಗಿ ತನ್ನ ಕಾಲದ ವಿಶಿಷ್ಟ ಅವಶ್ಯಕತೆಗಳಿಗೆ ಅನುಗುಣವಾಗಿ ತನಗೆಷ್ಟು ಬೇಕೋ ಅಷ್ಟನ್ನು ಪರಿಸರದಿಂದ ಪಡೆದೇ ತೀರುತ್ತದೆ. ಈ ಅರ್ಥದಲ್ಲಿ ಸಾಹಿತ್ಯದ ಆಂತರಿಕ ಅರ್ಥವಲಯಕ್ಕೂ ಸಾಮಾಜಿಕ ಬಹಿರ್ ಪ್ರಪಂಚಕ್ಕೂ ಒಂದು ವಿಧದ ಸಂಬಂಧ ಏರ್ಪಟ್ಟಿರುತ್ತದೆ. ನರೇಂದ್ರ ಮೋಹನರು ಗುರುತಿಸುವಂತೆ "ಕಲೆ ಮತ್ತು ಪ್ರತಿಭಟನೆಯ ಸಾಂಸ್ಕೃತಿಕ ಆಶೋತ್ತರಗಳೊಡನೆ ಅಥವಾ ಸಾಂಸ್ಕೃತಿಕ ಕ್ರಾಂತಿಯೊಡನೆ ಸೂಕ್ಷ್ಮವಾದ ಸಂಬಧ ಹೊಂದಿದೆ. ಸಾಂಸ್ಕೃತಿಕ ಕ್ರಾಂತಿಯು ರಾಜಕೀಯ ಪ್ರಜ್ಞೆ ಫಲವಾಗಿರುವಂತೆ ಸಮಾಜದ ಆಶೋತ್ತರಗಳ ಪ್ರತಿಬಿಂಬವೂ ಹೌದು."[೬] ಚರಿತ್ರೆಯುದ್ದಕ್ಕೂ ನಾವಿದನ್ನು ಕಾಣುತ್ತೇವೆಯಾದರೂ ಎಲ್ಲಾ ಕಡೆಯೂ ಒಂದೇ ವಿಧವಾದ ಸಂಬಂಧ ಸ್ವರೂಪವಿರುತ್ತದೆ ಎಂದು ಭಾವಿಸಬೇಕಾಗಿಲ್ಲ. ಚರಿತ್ರೆಯ ಗತಿಶೀಲತೆಯೊಂದಿಗೆ ಸಂಬಂಧದ ಸ್ವರೂಪದಲ್ಲಿಯೂ ಬದಲಾವಣೆ ಗೋಚರಿಸುವುದುಂಟು. ಈ ನಿಟ್ಟಿನಲ್ಲಿ ಪ್ರೇರಣೆಯನ್ನು ಅಭ್ಯಸಿಸುವುದು ಕೃತಿ ಸ್ವರೂಪವನ್ನು ಅರ್ಥಮಾಡಿಕೊಳ್ಳುವುದಕ್ಕೆ ವಿನಾ ಬೇರೇನೂಕ್ಕೂ ಅಲ್ಲ. ಶೋಷಣೆ ಈ ದೇಶದಲ್ಲಿ ಬಹಳ ಕಾಲದಿಂದಲೂ ನಿರಂತರವಾಗಿ ನಡೆಯುತ್ತ ಬಂದಿದ್ದರು ಸಾಹಿತ್ಯದಲ್ಲಿ ಕಾಣಿಸಿಕೊಳ್ಳಲು ಆರಂಭವಾದುದ್ದು ಇಪ್ಪತ್ತನೆಯ ಶತಮಾನದಲ್ಲಿ ಮಾತ್ರ, ಹೀಗಾಗಲು ನಿರ್ದಿಷ್ಟ ಕಾರಣವಿರಬೇಕು. ಅಂದರೆ ಒಟ್ಟಾರೆಯಾಗಿ ಸಾಹಿತ್ಯದಲ್ಲಿ ಕೆಲಸ ಮಾಡಿದ ಮತ್ತು ಮಾಡುತ್ತಿರುವ ಪ್ರಮುಖ ಘಟಕಗಳನ್ನೂ ಆ ಘಟಕಗಳ ಅಂತರ್ ಪ್ರಕ್ರಿಯೆಗಳಿಂದ ಹೊಮ್ಮುವ ಮೌಲ್ಯ ವಿನ್ಯಾಸಕ್ಕೂ, ಘಟಕಗಳ ರಚನೀಕರಣಕ್ಕೂ ಇರುವ ಸಂಬಂಧವನ್ನು ತಿಳಿದುಕೊಳ್ಳುವುದಕ್ಕೆ ನಾವು ಪ್ರೇರಣೆಗಳ ಮೊರೆ ಹೋಗಬೇಕು. ಸಾಹಿತ್ಯಿಕ ಸಂವೇದನೆಗಳ ಗ್ರಹಿಕೆ ಅದು.

ದಲಿತ ಸಾಹಿತ್ಯ ಚಳುವಳಿಯು ಪ್ರಬಲವಾಗಿ ಕಾಣಿಸಿಕೊಂಡದ್ದು ೧೯೭೦ರ ದಶಕದ ಉತ್ತರಾರ್ಧದಲ್ಲಿ. ಅದೇ ದಶಕದಲ್ಲಿ ನಡೆದ ಅನೇಕ ಘಟನೆಗಳು ಆ ಚಳುವಳಿಗೆ ಪ್ರೇರಣೆ ನೀಡಿವೆ ಮತ್ತು ಆ ಪ್ರೇರಣೆಗಳೇ ಚಳುವಳಿಯ ಮುಖ್ಯ ಪ್ರವೃತ್ತಿಯ ಸ್ವರೂಪವನ್ನು ನಿರ್ಧರಿಸಿವೆ. ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಈ ಪ್ರೇರಣೆಗಳನ್ನು 'ಸಾಹಿತ್ಯೇತರ' ಮತ್ತು 'ಸಾಹಿತ್ಯಿಕ' ಎಂದು ಎರಡು ರೀತಿಯಾಗಿ ವಿಭಜನೆ ಮಾಡಿಕೊಳ್ಳಬಹುದು. ಸಾಹಿತ್ಯೇತರದಲ್ಲಿ ಸಿದ್ಧಾಂತಗಳು ಮತ್ತು ಚಳವಳಿಗಳು ಎಂದು ಒಳ ವಿಭಾಗ ಮಾಡಿಕೊಳ್ಳಲು ಸಾಧ್ಯವಿದೆ.

---

೬. ಅರವಿಂದ ಮಾಗಲತ್ತಿ : ದಲಿತ ಸಾಹಿತ್ಯ ಪ್ರವೇಶಿಕೆ, ಶೈಲ ಪ್ರಕಾಶನ, ಮುದ್ದೇಬಿಹಾಲ, ೧೯೯೭, ಪುಟ - ೨೦.

# "ಸಾಹಿತ್ಯೇತರ ಪ್ರೇರಣೆಗಳು"

## ಪ್ರಮುಖ ಸಿದ್ಧಾಂತಗಳು

ಸ್ಥೂಲವಾಗಿ ಎಡಪಂಥೀಯ ಸಿದ್ಧಾಂತಗಳೆಲ್ಲವೂ ದಲಿತ ಸಾಹಿತ್ಯದ ಮೇಲೆ ಗಾಢ ಪ್ರಭಾವ ಬೀರಿವೆ. ಆ ಮೂಲಕ ಆ ಚಳುವಳಿಯ ಪ್ರಮುಖ ಬರಹಗಾರರ ಸೃಜನಶೀಲತೆಗೆ ಪ್ರೇರಣೆ ನೀಡಿದೆ. ಅವುಗಳಲ್ಲಿ ಕೆಲವು ಈ ಕೆಳಗಿನಂತಿವೆ.

### ೧. ಮಾರ್ಕ್ಸ್‌ವಾದ

ಕನ್ನಡದಲ್ಲಿ ಪ್ರಗತಿಶೀಲ ಚಳುವಳಿಗೆ ಪ್ರೇರಣೆ ನೀಡಿದ ಮಾರ್ಕ್ಸ್‌ವಾದವು ದಲಿತ ಸಾಹಿತ್ಯ ಚಳವಳಿಗೂ ಪ್ರಮುಖ ಪ್ರೇರಣೆಯಾಗಿದೆ. ಅದರಲ್ಲಿಯೂ ದಲಿತೇತರ ಬಂಡಾಯದ ಬರಹಗಾರರಿಗೆ ಮಾರ್ಕ್ಸ್ ಹೆಚ್ಚು ಪ್ರಿಯವಾದ. ಅಂತೆ ದಲಿತ ಬರಹಗಾರರಲ್ಲಿ ಹಲವರು ಮಾರ್ಕ್ಸ್‌ವಾದಿಗಳು. ಈ ಬರಹಗಾರರು ಎಲ್ಲಾ ಜಾತಿಯ ಬಡವರನ್ನು ಸಮಾನರೆಂದು ಗುರುತಿಸಿ ವರ್ಗ ಸಂಘರ್ಷಕ್ಕೆ ಪ್ರಚೋದನೆ ನೀಡುತ್ತಾರೆ. ಇಲ್ಲಿ ಜಾತಿ ವಿಷಯದ ಜೊತೆಗೆ ಆರ್ಥಿಕ ಸ್ಥಿತಿಯ ಬಗೆಗೂ ಹೆಚ್ಚು ಗಮನ ನೀಡಲಾಗುತ್ತದೆ. ಸಾಹಿತ್ಯ ಕೃತಿ ತಿಳಿದೋ ತಿಳಿಯದೆಯೋ ಬರಹಗಾರನ ವರ್ಗದ ಮಾನಸಿಕ ಧೋರಣೆಗಳನ್ನು ಪ್ರತಿ ಬಿಂಬಿಸುತ್ತದೆ. ಎಂದು ಮಾರ್ಕ್ಸ್ ವಿಮರ್ಶಕರು ಭಾವಿಸುತ್ತಾರೆ. ಇಂಥ ಕಡೆ ಸೃಜನಶೀಲ ಬರಹಗಾರರು ಕೃತಿಯ ವಸ್ತುವಿನ ಬಗ್ಗೆ, ಅದರಲ್ಲಿರುವ ಸಮಾಜ ರೂಪದ ಬಗ್ಗೆ ಹೆಚ್ಚಿನ ಗಮನಹರಿಸುತ್ತಾರೆ. ಕೃತಿಯ ರೂಪಕ್ಕೆ ಅಷ್ಟಾಗಿ ಗಮನವಿಲ್ಲ. ಪ್ರತೀ ಶ್ರೇಷ್ಠ ಕೃತಿಯಲ್ಲಿಯೂ ವಸ್ತುವೇ ರೂಪವನ್ನು ನಿರ್ಣಯಿಸುತ್ತದೆ ಎಂದು ನಂಬಿಯೇ ಇಲ್ಲಿ ಸಾಹಿತ್ಯ ಸೃಷ್ಟಿಯಾಗುತ್ತದೆ. ಇದರ ಜೊತೆಗೆ ಸಾಹಿತ್ಯರು ಮತ್ತು ಸಾಹಿತೆಯ ಹುಟ್ಟು ಸಮಾಜದ ಒಟ್ಟು ಉತ್ಪಾದನಾ ವ್ಯವಸ್ಥೆಯು ಒಂದು ಭಾಗವೇ ಆಗಿರುತ್ತದೆಂಬುವ ನಂಬಿಕೆ ಪೂರ್ವಗ್ರಾಹಿಕವಾಗಿ ಇಲ್ಲಿ ಕೆಲಸ ಮಾಡುವುದರಿಂದ ಸಾ ಮತ್ತು ಅವನ ಸಾಹಿತ್ಯ ಸಮಾಜದೊಂದಿಗೆ ಸ್ಪಂದಿಸಿಯೇ ತೀರಬೇಕೆಂದು ಇವರು ಹಠ ಹಿಡಿಯುತ್ತಾರೆ. ಈ ಹಠ ಅಂತಿಮವಾಗಿ ಸಾಹಿತಿಯು ರಾಜಕೀಯ ಸಂಗತಿಗಳಲ್ಲೂ ಆಸಕ್ತನಾಗಿರಬೇಕು ಎಂಬಲ್ಲಿಗೆ ತಲುಪುತ್ತದೆ.

### ೨. ಲೋಹಿಯಾವಾದ

ಆಧುನಿಕ ಭಾರತದಲ್ಲಿ ಒಂದು ಸೈದ್ಧಾಂತಿಕ ಶಕ್ತಿಯಾಗಿ ಮತ್ತು ರಾಜಕೀಯ ಚಳುವಳಿಯಾಗಿ ಸಮಕಾಲೀನ ಬದುಕನ್ನು ಸಾಕಷ್ಟು ಪ್ರಭಾವಿಸಿದ ಶಕ್ತಿ ಎಂದರೆ ಲೋಹಿಯಾವಾದ. ಮಾರ್ಕ್ ಮತ್ತು ನೆಹರು ವಾದಗಳಿಗೆ ಪರ್ಯಾಯವಾದ ಸಿದ್ಧಾಂತ ಇದೆಂದು ದಲಿತ ವರ್ಗದ ಲೇಖಕರು ಭಾವಿಸುತ್ತಾರೆ. ಲೋಹಿಯಾವಾದವು ಗಾಂಧಿವಾದದಿಂದ ಪ್ರೇರಣೆ ಪಡೆದು ಸಮಾಜ ವಾದವನ್ನು ಮುಂದಿಡುತ್ತದೆ. ಭಾರತೀಯ ರಾಜಕಾರಣದ ಏಕೈಕ ಬುದ್ಧಿ ಜೀವಿ ಎಂಬ ಹೆಗ್ಗಳಿಕೆಗೆ ಪಾತ್ರರಾದ ರಾಮಮನೋಹರ ಲೋಹಿಯಾರವರು ಬ್ರಾಹ್ಮಣೇತರ ಬರಹಗಾರರಿಗೆ ಪ್ರಮುಖ ಪ್ರೇರಣೆಯಾಗಿದ್ದಾರೆ. ಈ ಪ್ರೇರಣೆ ಮುಖ್ಯವಾಗಿ ಅಧಿಕಾರದ ವಿಕೇಂದ್ರೀಕರಣ ಮತ್ತು ಅಧಿಕಾರದ ನಾಶಕ್ಕೆ ಸಂಬಂಧಿಸಿ ಕ್ರಿಯಾಶೀಲವಾಗಿದೆ. ಇದರ ಜೊತೆಗೆ ಲೋಹಿಯಾ ಅವರು ಇಂಗ್ಲಿಷಿನ ಬಗ್ಗೆ, ಜಾತಿಯ ಬಗ್ಗೆ, ಅಂತರ ರಾಷ್ಟ್ರೀಯ ಕಪ್ಪು ಬಿಳುಪುಗಳ ಬಗ್ಗೆ, ಭಾರತೀಯ ದೇಶ ಭಾಷೆಗಳ ಬಗ್ಗೆ ಪ್ರಕಟ ಪಡಿಸಿರುವ ವಿಚಾರ ಧಾರೆಗಳಿಂದ ಕನ್ನಡದ ಬರಹಕಾರರು ಬಹಳಷ್ಟು ಪ್ರಭಾವಿತರಾಗಿದ್ದಾರೆ

## ೩. ಅಂಬೇಡ್ಕರ್‌ವಾದ

ಕನ್ನಡ ದಲಿತ ಬರಹಗಾರರೆಲ್ಲರೂ ಒಂದಲ್ಲಾ ಒಂದು ಬಗೆಯಲ್ಲಿ ಅಂಬೇಡ್ಕರ್ ವಾದದಿಂದ ಪ್ರೇರಣೆ ಪಡೆದವರೇ ಆಗಿದ್ದಾರೆ. ಅಂಬೇಡ್ಕರರು ದಲಿತರ ಸ್ವಾಭಿಮಾನದ ಸಂಕೇತ. ಅವರು ಭಾರತೀಯ ಸಮಾಜ ಮತ್ತು ರಾಷ್ಟ್ರದ ಸತ್ಯಹೀನತೆಯನ್ನು ನೇರವಾಗಿ ಗುರುತಿಸಿ ಆಳವಾಗಿ ಹಾಗೂ ವಿಸ್ತಾರವಾಗಿ ಅಭ್ಯಾಸಿಸಿ ಅದನ್ನು ವೈಯಕ್ತಿಕ ದುಃಖದಿಂದ ಅನುಭವಿಸಿ ರಾಜಕೀಯ ಸಾಮಾಜಿಕ ಆರ್ಥಿಕ ಮತ್ತು ಸಾಂಸ್ಕೃತಿಕ ಹೋರಾಟವನ್ನು ಹುಟ್ಟಿ ಹಾಕಿದರು. ಹಿಂದೂ ಧರ್ಮದ ಸಾಮಾಜಿಕ ವಿಷಮತೆಗೆ ಬ್ರಾಹ್ಮಣೀಕರಣ ಕಾರಣವೆಂದು ವಿಶ್ಲೇಷಿಸಿ ಅವರು ಬ್ರಾಹ್ಮಣ್ಯವನ್ನು ಕೆಳಕಂಡಂತೆ ಗುರುತಿಸಿದರು.

೧. ಅಸಮಾನತೆಯನ್ನು ನಿರಂತರವಾಗಿ ಪೋಷಿಸಿಕೊಂಡು ಬರುವುದು

೨. ಅಸ್ಪೃಶ್ಯರನ್ನು ಮತ್ತು ಶೂದ್ರರನ್ನು ಸಂಪೂರ್ಣವಾಗಿ ನಿರಾಯುಧರನ್ನಾಗಿ ಮಾಡುವುದು.

೩. ಅಧಿಕಾರ ಸ್ಥಾನಗಳನ್ನು ಶೂದ್ರರು ಮತ್ತು ಅಸ್ಪೃಶ್ಯರು ಹೊಂದದಂತೆ ಷಡ್ಯಂತ್ರಗಳನ್ನು ರೂಪಿಸುವುದು.

೪. ಶೂದ್ರರು ಮತ್ತು ಅಸ್ಪೃಶ್ಯರಿಗೆ ಶಿಕ್ಷಣ ದೊರೆಯದಂತೆ ನಿಷೇಧ ಹೇರುವುದು.

೫. ಶುದ್ರರು ಮತ್ತು ಅಸ್ಪೃಶ್ಯರಿಗೆ ಆಸ್ತಿ ನಿರಾಕರಣೆ ಮಾಡುವುದು.

೬. ಮಹಿಳೆಯರಿಗೆ ಸ್ವಾತಂತ್ರ್ಯ ನಿರಾಕರಿಸುವುದು.

ಅಂಬೇಡ್ಕರ್‌ರವರ ಪ್ರಕಾರ ಎಲ್ಲಾ ವಿಧಗಳಿಂದಲೂ ಅಸಮಾನತೆಯನ್ನು ಸಾಂಸ್ಥೀಕರಿಸುವುದೇ 'ಬ್ರಾಹ್ಮನಿಸಂ'ನ ಅಧಿಕೃತ ತತ್ವವಾಗಿದೆ. ಇದನ್ನು ತಲಸ್ಪರ್ಶಿಯಾಗಿ ವಿರೋಧಿಸಿದ ಅವರು ದಲಿತರ ಏಳಿಗೆಗಾಗಿ ಸ್ವಸುಧಾರಣೆ, ಸ್ವ - ಪ್ರಗತಿ, ಸ್ವಾವಲಂಬನೆ, ಸ್ವಾಭಿಮಾನ, ಸ್ವ ಪ್ರತ್ಯಯ' ಇವನ್ನು ಬಲಾಗಿ ಪ್ರತಿಪಾದಿಸಿದರು. ಅವರ ಎಲ್ಲಾ ನಿಲುವುಗಳು ಎಲ್ಲಾ ಭಾಷೆಯ ದಲಿತ ಸಾಹಿತ್ಯದಲ್ಲಿ ವ್ಯಕ್ತವಾಗಿವೆ.

### ಚಳುವಳಿಗಳು

೧೯೬೯ ರಲ್ಲಿ ರಿಂದೀಚೆಗೆ ನಡೆದ ಚಳುವಳಿಗಳು ಮತ್ತು ಅನೇಕ ಘಟನೆಗಳು ದಲಿತ ಸಾಹಿತ್ಯದ ಮೇಲೆ ಒಂದಲ್ಲಒಂದು ರೀತಿಯ ಪ್ರಭಾವ ಬೀರಿವೆ. ಅವುಗಳನ್ನು ಸ್ಥೂಲವಾಗಿ ಈ ಕೆಳಗಿನಂತೆ ಗುರುತಿಸಬಹುದು.

ಸ್ವಾತಂತ್ರ್ಯ ಪೂರ್ವ ಭಾರತದಲ್ಲಿ ನಡೆದ ರಾಷ್ಟ್ರೀಯ ಚಳುವಳಿಯಿಂದ ಪ್ರೇರಿತರಾದ ಹಲವಾರು ಜನ ಗಾಂಧೀ ಅನುಯಾಯಿಗಳು ದಲಿತೋದ್ಧಾರದಂಥ ಪ್ರಗತಿಪರ ಕೆಲಸಗಳನ್ನು ಮಾಡಿದರು. ಗೋಪಾಲಸ್ವಾಮಿ ಆಯ್ಯರ್, ತಗಡೂರು ರಾಮಚಂದ್ರ ರಾಯರು, ಕಧ್ಮಲ್ ರಂಗರಾಯ, ವಿಜಾಪುರದ ಶಾಶಾ ಖಾಸಾನಿಸ್, ಹರ್ಡೇಕರ್ ಮಂಜಪ್ಪ, ಕಾರ್ನಾಡ ಸದಾಶಿವರಾವ್, ಸಿ.ಆರ್.ರೆಡ್ಡಿ, ಮೊದಲಾದವರು ದಲಿತರಲ್ಲಿ ಹುಟ್ಟಿಸಿದ ಸ್ವಾಭಿಮಾಕ್ಕೆ ಚಾರಿತ್ರಿಕ ಮಹತ್ವವಿದೆ. ಅನಂತರದ ಕಾಲದಲ್ಲಿ ಬಹು ಮುಖ್ಯವಾದ ಘಟನೆ ನಡೆದದ್ದು ೧೯೬೯ ರಲ್ಲಿ. ಆಗಿನ ಕರ್ನಾಟಕದ ಮುಖ್ಯ ಮಂತ್ರಿಯಾಗಿದ್ದ ದೇವರಾಜು ಅರಸು ಅವರ ನೇತೃತ್ವದಲ್ಲಿ ಎಲ್.ಜಿ. ಹಾವನೂರರು ಮಂಡಿಸಿದ ವರದಿಯ ಜಾರಿಗಾಗಿ ೧೯೬೯ರ ಅಂಬೇಡ್ಕರ್ ದಿನದಂದು (ಏಪ್ರಿಲ್ ೧೪) ನಡೆಸಿದ ಆಂದೋಲನದಿಂದಾಗಿ ದಲಿತ ಬುದ್ಧಿ ಜೀವಿಗಳಲ್ಲಿ ಒಂದು ನಿರ್ದಿಷ್ಟ ಕಾರಣಕ್ಕೆ ಒಂದುಗೂಂಡಿದಂತಾಯಿತ್ತು, ಮುಂದೆ ೧೯೭೩ ರಲ್ಲಿ ನಡೆದ ಬಸವಲಿಂಗಪ್ಪನವರ 'ಬೂಸಾ ಪ್ರಕರಣ'ದಲ್ಲಿ ಮೇಲಿನ ಬುದ್ಧಿಜೀವಿಗಳೆಲ್ಲಾ

ಸಕ್ರಿಯವಾಗಿ ಪಾಲ್ಗೊಂಡಿದ್ದರು. ೧೯೭೩ ರಲ್ಲಿ ರಾಜಕಾರಣಿಯಾಗಿದ್ದ ಬಸವಲಿಂಗಪ್ಪನವರು ದಲಿತರು ತಲೆಯಲ್ಲಿ ಮಲಹೊರುವುದನ್ನು ನಿಲ್ಲಿಸಲು ಕರೆಕೊಟ್ಟರು. ಇದರ ಜೊತೆಗೆ ಧರ್ಮ ದೇರು ಜಾತಿಯ ವಿರುದ್ಧ ಕರ್ನಾಟಕದ ಯುವಜನತೆ ಕೂಗೆಬ್ಬಿಸಿತು. ಪರಿಣಾಮವಾಗಿ ೧೯೭೩ ಆಗಸ್ಟ್ ೨೫ - ೨೬ರಂದು ಮೈಸೂರಿನಲ್ಲಿ 'ಜಾತಿ ವಿನಾಶಿ ಸಮ್ಮೇಳನ' ನಡೆಯಿತು. ಈ ಸಮ್ಮೇಳನದ ಹಿಂದೆ ಲೋಹಿಯಾ ವೈಚಾರಿಕತೆಯಿತ್ತು, ಲಂಕೇಶ್, ತೇಜಸ್ವಿ, ರಾಮದಾಸ್, ಶ್ರೀಕೃಷ್ಣ ಆಲನಹಳ್ಳಿ, ದೇವನೂರು ಮಹಾದೇವ, ಸಿದ್ಧಲಿಂಗಯ್ಯ ಮೊದಲಾದವರೆಲ್ಲಾ ಈ ಸಮ್ಮಳನದಲ್ಲಿ ಪಾಲ್ಗೊಂಡು ಕರ್ನಾಟಕದಾದ್ಯಂತ ಒಂದು ಬಗೆಯ ರೋಮಾಚನ ಉಂಟು ಮಾಡಿದರು. ಇದೇ ಜನಗಳು ಮುಂದೆ ೧೯೭೪ ರಲ್ಲಿ ಏಪ್ರಿಲ್ ೨೦ ೨೧ ರಲ್ಲಿ 'ಬರಹಗಾರರ ಮತ್ತು ಕಲಾವಿದರ ಒಕ್ಕೂಟ' ರಚಿಸಿಕೊಂಡು ಮೈಸೂರಿನಲ್ಲಿ ಸಮ್ಮೇಳನ ಮಾಡಿದರು. ಶೂದ್ರಪ್ರಜ್ಞೆ ಇನ್ನೊಮ್ಮೆ ಸ್ವಾಭಿ ಮಾನದ ಸಂಕೇತವಾಯಿತು. ಆ ಸಮ್ಮೇಳನದಲ್ಲಿ ಕುವೆಂಪು ಅವರು ಮಾಡಿದ ಭಾಷಣ ಅನೇಕರ ರಕ್ತವನ್ನು ಬೆಚ್ಚಗಾಗಿಸಿತು. 'ಕನ್ನಡ ಸಾಹಿತ್ಯದಲ್ಲಿರುವುದೆಲ್ಲಾ ಬೂಸಾ' ಎಂದು ಹೇಳಿದ ಬಸವ ಲಿಂಗಪ್ಪನವರು ಆಕಾರಣಕ್ಕಾಗಿ ಮಂತ್ರಿ ಪದವಿಯನ್ನು ಕಳೆದುಕೊಂಡರೂ ಸ್ವಸ್ಥಚಿತ್ರರಾಗಿ ನಿದ್ರಿಸುತ್ತಿದ್ದ ಸಾಂಪ್ರದಾಯಿಕ ಸಾಹಿತಿಗಳ ಚಿತ್ತವನ್ನು ಕೆಡಿಸುವುದರಲ್ಲಿ ಯಶಸ್ವಿಯಾದರು. ಜಡವಾಗಿದ್ದ ಸಾಹಿತಿಗಳ ಸಮುದಾಯ ಮೈಕೊಡವಿ ನಿಲ್ಲುವಂತಾಯಿತು.

ದಲಿತರಲ್ಲಿ ಉಂಟಾದ ಎಚ್ಚರದ ಪರಿಣಾಮವಾಗಿ ೧೯೭೪ ರಲ್ಲಿ ಭದ್ರಾವತಿಯಲ್ಲಿ 'ದಲಿತ ಸಂಘರ್ಷ ಸಮಿತಿ' ರೂಪುಗೊಂಡಿತು : ಮುಂದೆ ಇದು ಕರ್ನಾಟಕ ದಲಿತ ಸಂಘರ್ಷ ಸಮಿತಿಯಾಗಿ ಬಳೆದು ದಲಿತರ ಸಂರಕ್ಷಣೆಗೆ ಕಟಿಬದ್ಧವಾಯಿತು. ಕರ್ನಾಟಕದಾದ್ಯಂತ ಪಸರಿಸಿಕೊಂಡ ದಲಿತ ಸಂಘರ್ಷ ಸಮಿತಿ, ದಲಿತರ ಮೇಲಿರುವ ದೌರ್ಜನ್ಯದ ವಿರುದ್ಧ ಎತ್ತಿದ ಸ್ವರ ಅಸಾಧಾರಣಾದುದು. ಮುಂದೆ ಇದು 'ದಲಿತ ವಿದ್ಯಾರ್ಥಿ ಒಕ್ಕೂಟ', 'ದಲಿತ ಮಹಿಳಾ ಒಕ್ಕೂಟ', 'ದಲಿತ ಕಲಾ ಮಂಡಳಿ', 'ದಲಿತ ನೌಕರರ ಒಕ್ಕೂಟ', 'ದಲಿತ ವೈದ್ಯರ ಒಕ್ಕೂಟ' ಇವೆ ಮೊದಲಾದ ಹಲವು ಸಹಸಂಘಟನೆಗಳನ್ನು ಕಟ್ಟಿ ಬೆಳೆಸಿತು. ದಲಿತ ಸಾಹಿತ್ಯವನ್ನು ಗಟ್ಟಿಯಾಗಿ ಬೆಳೆಸಿದ್ದು ಅಲ್ಲದೆ. ಅದರ ಸ್ವರ ಬೀದಿ ಬಿದಿಯಲ್ಲಿ ಕೇಳಿಸುವಂತಾಗಲು ದಲಿತ ಸಂಘರ್ಷ ಸಮಿತಿಯೇ ಕಾರಣ.

ಕಾಂಗ್ರೆಸ್‌ನ ಬೂರ್ಜ್ವಾ ಉದಾರತ್ವದ ಫಲವಾಗಿ ೭೦ರ ದಶಕದಲ್ಲಿ ಭೂ ಮಸೂದೆ ಕರ್ನಾಟಕದಾದ್ಯಂತ ಜಾರಿಗೆ ಬಂದಿತು. ದೇವರಾಜ ಅರಸು ಅವರದು ಈ ನಿಟ್ಟನಲ್ಲಿ ಕ್ರಾಂತಿಕಾರಿ ಕೆಲಸ. ಜಮೀನು ಇಲ್ಲದ ಅಸಂಖ್ಯ ಜನರು ಇದರಿಂದಾಗಿ ಜಮೀನು ಪಡೆಯುವಂತಾಯಿತು. ಖಾಸಗೀ ಜಮೀನನ್ನು ಹೊಂದಿದ್ದ ಕೆಳವರ್ಗದ ಜನರಲ್ಲಿ ಮಾಡಿದ ಸ್ವಾಭಿಮಾನವು ಚರಿತ್ರೆಯ ದಾಖಲೆಗೆ ಹಿಡಿದ ಕನ್ನಡಿಯಾಯಿತು. ಹೀಗೆ ಭೂ ಮಸೂದೆಯ ಕಾರಣದಿಂದಾಗಿ ಜಮೀನು ಸಂಬಂಧವಾದ ಬದಲಾವಣೆ ಅಂತಿಮವಾಗಿ ಸಾಹಿತ್ಯದ ಮೇಲೂ ಪರಿಣಾಮ ಬೀರಿದೆ. ಇದರ ಜೊತೆಗೆ, ಕಾಂಗ್ರೆಸ್, ಸರಕಾರ ಜಾರಿಗೆ ತಂದ ಮೀಸಲಾತಿ ಕ್ರಮದಿಂದಲೂ ಭಾರಿ ಬದಲಾವಣೆಗಳು ಗೋಚರಿಸಿದವು. ಸುಶಿಕ್ಷಿತ ದಲಿತರು ಕಾಣಿಸಿಕೊಳ್ಳಲಾರಂಭಿಸಿದ ಕೆಲವು ತಿಂಗಳುಗಳಲ್ಲಿಯೇ ಭದ್ರಾವತಿಯಲ್ಲಿ (೧೯೭೬) 'ದಲಿತ ಬರಹಗಾರರ ಯಾವ ಸಂಘಟನೆ' ರೂಪುಗೊಂಡಿತು. ಅದರ ಹಿಂದೆ ಮುಂದೆ ಮಾರ್ಕ್ಸ್‌ವಾದಿಗಳೇ ಓಡಾಡುತ್ತಿದ್ದರು.

೧೯೭೫ ರಲ್ಲಿ ಜೂನ್ ೨೫ ರಲ್ಲಿ ಜಾರಿಗೆ ಬಂದ 'ತುರ್ತು ಪರಿಸ್ಥಿತಿ'ಯಿಂದಾಗಿ ಕರ್ನಾಟಕದ ಕೆಲವು ಬರಹಗಾರರು ಮತ್ತು ಕಲಾವಿದರು ಬೀದಿಗಿಳಿಯಬೇಕಾಯಿತು. ಕೆಲವರು ಭೂಗತವಾಗಿದ್ದುಕೊಂಡು ತುರ್ತುಪರಿಸ್ಥಿತಿಯನ್ನು ವಿರೋಧಿದರು. ಚಂದ್ರಶೇಖರ ಪಾಟೀಲರು ಸೆರೆಮನೆ ಕಂಡರು. ಅಂಥ ಘಟನೆಗಳು ಸಾಹಿತಿಗಳ ಮೈಚಳಿ ಬಿಡಿಸಿದ್ದಂತೂ ಸ್ಪಷ್ಟ. ಸಾಹಿತಿಗಳು ತಮಗೆ ರಾಜಕೀಯ ಕಾಳಜಿ ಅಗತ್ಯ ಮತ್ತು ಭಾರತದಲ್ಲಿ ಅನಿವಾರ್ಯ ಎಂದು ಭಾವಿಸಲು ಆರಂಭಿಸಿದರು.

ಇವುಗಳೆಲ್ಲವುಗಳ ಮಧ್ಯೆ ೧೯೭೬ ರ ಮಾರ್ಚ್ ೧೦ ರಂದು ಧರ್ಮಸ್ಥಳದಲ್ಲಿ ಸಾಹಿತ್ಯ ಸಮ್ಮೇಳನ ನಡೆದು ಅದಕ್ಕೆ ಗೋಪಾಲಕೃಷ್ಣ ಅಡಿಗರು ಅಧ್ಯಕ್ಷರಾಗಿದ್ದರು. ಸಮ್ಮೇಳನದಲ್ಲಿ 'ದಲಿತ ಸಾಹಿತ್ಯ'ದ ಬಗ್ಗೆ ಪ್ರತ್ಯೇಕ ಗೋಷ್ಠಿಯನ್ನಿಡಲು ಕನ್ನಡ ಸಾಹಿತ್ಯ ಪರಿಷತ್ತು ಒಪ್ಪದೆ ಇದ್ದುದರಿಂದ ದಲಿತಪರ ಬಂಡಾಯ ಸಾಹಿತಿಗಳೆಲ್ಲಾ ಒಟ್ಟಾಗಿ ಪ್ರತ್ಯೇಕ ಸಮ್ಮೇಳನ ನಡೆಸಲು ನಿರ್ಧರಿಸಿದರು. ಅದುವರೆಗೆ ಸಾಹಿತಿಗಳ ನಡುವೆ ಬೆಳೆದು ಬಂದಿದ್ದ ಅಸಮಧಾನ ಸ್ಫೋಟಗೊಳ್ಳಲು ಧರ್ಮಸ್ಥಳ ಸಾಹಿತ್ಯ ಸಮ್ಮೇಳನ ಒಂದು ನೆಪವಾಯಿತು. ಹೀಗೆ ಹುಟ್ಟಿಕೊಂಡ ಬಂಡಾಯ ಚಳುವಳಿಯಿಂದ ೧೯೮೩ ರ ಡಿಸೆಂಬರ್ ೧೦ - ೧೧ ರಂದು ದಲಿತರು ಬೇರ್ಪಟ್ಟರು. ಅವರು ಧಾರವಾಡದಲ್ಲಿ 'ದಲಿತ ಲೇಖಕರ ಮತ್ತು ಕಲಾವಿದರ ಬಳಗ' ರಚಿಸಿಕೊಂಡರು. ದಲಿತ ಸಂಘರ್ಷ ಸಮಿತಿ ಇಬ್ಭಾಗವಾದುದರ ಪರಿಣಾಮವಾಗಿ ೧೯೮೬ ರ ಡಿಸೆಂಬರ್ ೨೧ ರಂದು ಬೆಂಗಳೂರಿನಲ್ಲಿ 'ದಲಿತ ಸಾಹಿತಿಗಳ ಸಮಾವೇಶ' ನಡೆಯಿತು. ಇವೆಲ್ಲವೂ ದಲಿತರಲ್ಲಾದ ಎಚ್ಚರದ ಪರಿಣಾಮಗಳೇ ಆಗಿವೆ.

**ಪತ್ರಿಕೆಗಳು**

ಕರ್ನಾಟಕ ಅನೇಕ ಪತ್ರಿಕೆಗಳು ದಲಿತರ ಬಗೆಗೆ ಮೃದು ಭಾವವನ್ನಿಟ್ಟುಕೊಂಡು ಅವರ ಸಾಹಿತ್ಯವನ್ನು ಬೆಳೆಸಿದೆ. ಅದರಲ್ಲಿ ಬಹಳ ಮುಖ್ಯವಾದುದು ಚಂದ್ರಶೇಖರ ಪಾಟೀಲರ ಸಂಪಾದಕತ್ವದಲ್ಲಿ ಹೊರಬರುವ 'ಸಂಕ್ರಮಣ' ಮಾಸಿಕ, ಬಂಡಾಯ - ದಲಿತ ಚಳುವಳಿಯ ಆರಂಭದಿಂದಲೂ ಪಾಟೀಲರು ಅದರ ಬೆನ್ನೆಲುಬಾಗಿ ನಿಂತು ದಲಿತ ವೇದಿಕೆಯಲ್ಲಿ ನಡೆಯುವ ಘಟನೆಗಳನ್ನು ದಾಖಲಿಸುತ್ತಾ ಬಂದರು. ಆರ್.ಜಿ. ಹಳ್ಳಿನಾಗರಾಜರ ಸಂಪಾದಕತ್ವದ 'ಅನ್ವೇಷಣೆ' ದ್ವೈಮಾಸಿಕವು ನವ್ಯೋತ್ತರ ಸಾಹಿತ್ಯದ ದಾಖಲಾತಿಗೆಂದೇ ಹುಟ್ಟಿಕೊಂಡ ಪತ್ರಿಕೆ. ವಡ್ಡರ್ಸೆ ರಘುರಾಮ ಶೆಟ್ಟರ ಸಂಪಾದಕತ್ವದ 'ಮುಂಗಾರು' ದೈನಿಕವು ದಲಿತ ಚಳುವಳಿ ಮತ್ತು ಸಾಹಿತ್ಯವನ್ನು ನಿರಂತರವಾಗಿ ಪೋಷಿಸಿಕೊಂಡು ಬಂದಿದೆ. ಇವುಗಳ ಜೊತೆಗೆ ದಲಿತರ ಮುಖವಾಣಿಯಾದ 'ಪಂಚಮ', ಮತ್ತು 'ಹೊಸದಿಕ್ಕು' ಪತ್ರಿಕೆಗಳು ಸಮುದಾಯದ ಮುಖವಾಣಿಯಾಗಿದ್ದು ಸಮುದಾಯ ವಾರ್ತಾ ಪತ್ರ, ಕಮ್ಯುನಿಷ್ಟ್ ಪಕ್ಷಗಳ ಪತ್ರಿಕೆಗಳಾಗಿರುವ 'ಕೆಂಪು ಬಾವುಟ' ಮತ್ತು 'ಐಕ್ಯಾರಂಗ' ದಲಿತ ಚಳುವಳಿಗೆ ಪ್ರಮುಖ ಒತ್ತಾಸೆ ನೀಡಿವೆ.

## ಸಾಹಿತ್ಯಿಕ ಪ್ರೇರಣೆಗಳು

### ೧. ಕನ್ನಡ ನವ್ಯ ಸಾಹಿತ್ಯದ ಮಿತಿಗಳು

ಯಾವುದೇ ಸಾಹಿತ್ಯ ಸಂಪ್ರದಾಯವಾದರೂ, ತನ್ನ ಸಾಧ್ಯತೆಗಳನ್ನು ತೀರಿಸಿಕೊಂಡು ಜಡವಾಗುತ್ತದೆ. ಆ ಸಂಪ್ರದಾಯ ಹುಟ್ಟಿಕೊಳ್ಳುವಾಗ ಹೊಸದಾಗಿ ಕಂಡ ಬದುಕಿನ ಹಾಗೂ ಅಭಿವ್ಯಕ್ತಿಯ ಅವಕಾಶಗಳು ಮುಗಿದು ಹೋಗಿ, ನಿಧಾನವಾಗಿ ಹೇಳಿದ್ದನ್ನೇ ಹೇಳುವ ಹೇಳಿದ ಹಾಗೆ ಹೇಳುವ ಕೆಲಸ ಆರಂಭವಾಗುತ್ತದೆ.

ಇಂಥ ದೌರ್ಬಲ್ಯಗಳ ವಿರುದ್ಧ ಅಸಮಾಧಾನ, ಪ್ರತಿಭಟನೆ ಆರಂಭವಾಗಿ ಇನ್ನೊಂದು ಹೊಸ ಮಾರ್ಗದ ಅನ್ವೇಷಣೆಗೆ ಎಡೆಮಾಡಿ ಕೊಡುತ್ತದೆ. ಜಗತ್ತಿನ ಎಲ್ಲಾ ಸಾಹಿತ್ಯ ಚರಿತ್ರೆಗಳ ಕಥೆಯೇ ಹೀಗಿರುವಾಗ ಅದಕ್ಕೆ ದಲಿತ ಸಾಹಿತ್ಯವು ಅಪರೂಪವಾಗಲಾರದು. ಅದು ಕನ್ನಡ ನವ್ಯ ಕಾವ್ಯದ ನಂತರ ಕ್ರಿಯಾಶೀಲವಾಯಿತು.

ಕನ್ನಡ ನವ್ಯ ಸಾಹಿತ್ಯ ಸುಮಾರು ಎರಡು ದಶಕಗಳವರೆಗೆ (೧೯೫೦ - ೭೦) ತಾನೇ ತಾನಾಗಿ ಮೆರೆದು ಗೋಪಾಲಕೃಷ್ಣ ಅಡಿಗ, ರಾಮಚಂದ್ರ ಶರ್ಮ, ರಾಮನುಜನ್, ಯಶವಂತ ಚಿತ್ತಾಲ, ಚಂದ್ರಶೇಖರ ಕಂಬಾರ, ಶಾಂತಿನಾಥ ದೇಸಾಯಿ, ಅನಂತಮೂರ್ತಿ, ತಿರುಮಲೇಶರಂಥ ಮಹತ್ವದ ಲೇಖಕರನ್ನು ಕನ್ನಡಕ್ಕೆ ನೀಡಿತು. ಕನ್ನಡದ ಈ ನವ್ಯ ಸಾಹಿತಿಗಳು ಅದೇ ಕಾಲದ ಭಾರತೀಯ ಸಾಹಿತ್ಯದಲ್ಲಿಯೂ ಮುಂಚೂಣಿಯಲ್ಲಿ ನಿಲ್ಲಬಲ್ಲ ಪ್ರತಿಭಾವಂತರು. ಇವರು ಕನ್ನಡಕ್ಕೆ ಹೊಸ ಬಗೆಯ ಸಂವೇಧನ ಆಕೃತಿ ಅನುಭವಗಳನ್ನು ನೀಡಿದರು. ಅನುಭವ ಜನ್ಯವಾದ ವಿಚಾರಗಳಿಗೆ ನವ್ಯದವರು ಎಲ್ಲಿಲ್ಲದ ಮಹತ್ವ ನೀಡಿದರು. ಈ ಅರ್ಥದಲ್ಲಿ ನವ್ಯ ಸಾಹಿತ್ಯವು ಸಮಾಜಕ್ಕೆ ಅತಿಯಾದ ಮಾನ್ಯತೆ ನೀಡಿದೆ. ಇದನ್ನು ಡಿ.ಆರ್.ನಾಗರಾಜು ಹೇಗೆ ಗುರುತಿಸಿದ್ದಾರೆ. "ಸದ್ಯದ ತೀವ್ರತೆಗೆ ಅತ್ಯುನ್ನತ ಸ್ಥಾನಕೊಡುವ ಬರವಣಿಗೆಯ ಕ್ರಮ ಇದು. ಇದರ ಪರಿಣಾಮವೆಂದರೆ ನವ್ಯ ಸಾಹಿತ್ಯ ಕೃತಿಗಳು ಸಾಮಾಜಿಕ ವಿಮರ್ಶೆಯ ಪರಿಧಿಯಲ್ಲಿಯೇ ಸುತ್ತುವುದು. ನವ್ಯದ ಆಕೃತಿಯ ಸಮಸ್ಯೆಯೆಂದರೆ ಸಾಮಾಜಿಕ ವಾಸ್ತವ ಕಡಿಮೆ ಇರುವುದಿಲ್ಲ. ಈ ವಾಸ್ತವಕ್ಕೆ ಅತಿಯಾಗಿ ಅಂಟಿಕೊಂಡು ಅದು ಬಿಟ್ಟಿದೆ. ಅದು ಕಾವ್ಯ, ಕಥೆ, ನಾಟಕ ಹೀಗೆ ಎಲ್ಲಾ ಪ್ರಕಾರಗಳಿಗೂ ಅನ್ವಯಿಸವಂಥ ಮಾತು. ಅಡಿಗರ ಕಾವ್ಯಕೃತಿಯ ಕಲ್ಪನೆ, ಲಂಕೇಶರ, ಅನಂತ ಮೂರ್ತಿಯವರ ಕಥನದ ಕಲ್ಪನೆ ಒಂದೇ ರೀತಿಯದು. 'ದಿ ವರ್ಲ್ಡ್ ಈಸ್ ಟೂ ಮಚ್ ವಿಥ್ ಅಶ್''[೮] ನವ್ಯದ ಎಲ್ಲಾ ಬರಹಗಳು ಅತಿ ಎನ್ನುವ ಏಕಾಂಗಿತನವನ್ನು ಸಮಾಜದಿಂದ ದೂರಸರಿದ ವ್ಯಕ್ತಿತ್ವವನ್ನು ಕೀರ್ತಿಸತೊಡಗಿದವು. ಹೀಗೆ ಕೀರ್ತಿಸಿಕೊಳ್ಳುವುದು ಆಧುನಿಕ ಮನುಷ್ಯನ ಗುಣವೂ ಹೌದು. ಎಂದರೆ ಸಾಹಿತ್ಯದ ಗುಣ ಮತ್ತು ಸಮಾಜದ ಗುಣ ಬಹುಮಟ್ಟಿಗೆ ಎರಡೂ ಒಂದೇ ಎನ್ನುವ ಹಾಗಾಯಿತು. ಇಂಥ ಕಡೆ ಸಾಹಿತ್ಯದ ಜವಾಬ್ದಾರಿ ಒಂದು ಮಿತಿಗೊಳಪಡುತ್ತದೆ. ನವ್ಯ ಸಾಹಿತ್ಯದ ಕಟ್ಟನಲ್ಲಿ ಕಂಡು ಬಂದ 'ಅನುಭವದ ತಾರ್ತಿಕ ಪೃಥಕ್ಕರಣೆ' ಕೂಡಾ ಆಧುನಿಕ ಜಗತ್ತಿನ ಗುಣವೇ ಆಗಿದೆ. ಜಗತ್ತಿನೊಂದಿಗೆ ತಾಳೆ ಹಾಕುವ ಕಾವ್ಯ ತನ್ನ ಅನನ್ಯತೆಯನ್ನು ಕಳೆದುಕೊಳ್ಳುವ ಪ್ರಯುಕ್ತ, ಹೆಚ್ಚು ಕಾಲ ನಿಲ್ಲದೆ ಹೋಗುತ್ತದೆ. ರಷ್ಯನ್ ನವ್ಯ ಸಾಹಿತ್ಯವೂ ವಾಸ್ತವದ ಚಿತ್ರೀಕರಣದ ಮೂಲಕ ಪ್ರಗತಿ ಸಾಧಿಸಿದರೆ, ಬೋದಿರೇಲ್ ಫ್ರಾನ್ಸ್‌ನಲ್ಲಿ ವಿಕೃತಾನುಭವಗಳನ್ನು ದಾಖಲಿಸಿ ಕ್ರಾಂತಿ ಮಾಡಿದೆ. ಅಂದರೆ ಇವೆರಡರ್ಥ ಇಷ್ಟು ಸಮಕಾಲೀನ ನಾಗರೀಕತೆಯ ವಿರುದ್ಧ ಯಾರು ಹೊಸಬಗೆಯಲ್ಲಿ ಧ್ವನಿ ಎತ್ತಿದರೂ ಅವರು ಪ್ರಗತಿಪರ ಬರೆಹಗಾರರಾದರು. ಡಿ.ಆರ್. ನಾಗರಾಜು ಅವರು ಇದನ್ನು ತರ್ಕ ಬದ್ಧವಾಗಿ ವಿಶ್ಲೇಷಿಸಿದ್ದಾರೆ. "ತರ್ಕರೂಪೀ ಕಾವ್ಯ ತರ್ಕವೇ ಆತ್ಮವಾಗಿರುವ ನಾಗರೀಕತೆಯ ಮಟ್ಟ ನಿಲ್ಲಲಾರದು. ಕನಸುಗಳ, ಪುರಾಣಗಳ, ಸಹಯೋಗಗಳ ಪಾರದರ್ಶಕವಲ್ಲದ ಗ್ರಹಿಕೆಯ ಕ್ರಮಗಳು ಮಾತ್ರ ಈ ನಾಗರೀಕತೆಗೆ ಸವಾಲು. ಈ ನಾಗರೀಕತೆ ಯಾವುದನ್ನು ಕಂಡು ಬೆಚ್ಚುತ್ತದೆ? ಸಸ್ಪೆಂಡರಿ ಸಮಾಜವಾಧಿ ಪದ್ಯಗಳನ್ನೇ ? ಬೋದಿಲೇರನ ನರಕದ ರೂಪಗಳನ್ನೇ? ನರಕದ ರೂಪಗಳೇ ಈಗಿನ ಸಮಾಜದ ಮೇನೇಜರುಗಳನ್ನು ಬೆಚ್ಚಿಸುವುದು ಈ ಸಮಾಜ ತನಗೆ ಸುಲಭವಾಗುವ ಎಲ್ಲವನ್ನು ಪಳಗಿಸಿಕೊಂಡು ಬಿಡುತ್ತದೆ. ತನಗೆ ಗೊತ್ತಿರುವ ಪರಿಭಾಷೆಯಲ್ಲಿ ಮಾತನಾಡಲು ತನ್ನ ವಿರೋಧಿಗಳನ್ನು ಕೂಡಾ ಒತ್ತಾಯಿಸುತ್ತದೆ.

---

೮. ಡಿ.ಆರ್. ನಾಗರಾಜ: ನವ್ಯ ಚಳುವಳಿ; ಕೆಲವು ಚೆಲ್ಲಪಿಲ್ಲಿ ಚಿಂತನೆಗಳು, ೧೯೬೯, ಪುಟ - ೧೬೭

ಹೀಗೆ ನವ್ಯದ ಮೂಲ ಸಿದ್ಧಾಂತಿಕತೆ ಮತ್ತು ಅದರ ಅಭಿವ್ಯಕ್ತಿ ಕ್ರಮವು ನಾಗರೀಕ ಜಗತ್ತಿನಲ್ಲಿ ನಿಲ್ಲದೆ ಹೋಯಿತು.[೯] ಹೊಸ ಆಕೃತಿಗಳ ಹುಡುಕಾಟಕ್ಕೆ ತಾನೇ ತಾನಾಗಿ ಎಡೆ ಮಾಡಿಕೊಟ್ಟಿತು. ಸಿದ್ಧಲಿಂಗಯ್ಯನವರ 'ಹೊಲೆಮಾದಿಗರ ಹಾಡು' ಹೊಸ ಆಕೃತಿಯ ಪ್ರತೀಕ ಆಯಿತು.

ಐತಿಹಾಸಿಕವಾಗಿ ನವ್ಯದ ನಿಸ್ತೇಜತನವನ್ನು ಗಟ್ಟಿಯಾಗಿ ಸಾರಿದ್ದು ಪೂರ್ಣ ಚಂದ್ರ ತೇಜಸ್ವಿ ಅವರು. ಅದು ಬಹಳ ಮಹತ್ವದ ದಾಖಲೆಯಾದರಿಂದ ಪೂರ್ಣವಾಗಿ ಇದೂ ಅದನ್ನು ಗಮನಿಸಬೇಕು. 'ಅಬಚೂರಿನ ಪೋಸ್ಟಾಫೀಸು' ಎಂಬ ತಮ್ಮ ಕಥಾ ಸಂಕಲನಕ್ಕೆ ಬರೆದ ಮುನ್ನಡಿಯಲ್ಲಿ ಅವರು ಹೀಗೆಂದರು "ನವ್ಯ ಸಾಹಿತ್ಯ ಸಂಪೂರ್ಣ ನಿಸ್ತೇಜಿ ಗೊಂಡಿದೆ. ಬದಲಾಗುತ್ತಿರುವ ಪರಿಸರದ ಹೊಸ ಜವಾಬ್ದಾರಿಗಳನ್ನು ಅದು ಹೊರಲಾರದು. ಏಕೆಂದರೆ ಮೊದಲನೇಯದಾಗಿ ಯಾಂತ್ರಿಕವಾಗಿರುವ ಅದರ ಸಾಂಕೇತಿಕ ಶೈಲಿ, ತಂತ್ರಗಳು, ಕೇವಲ ಉಪಾಧ್ಯಾರೇ ಹೆಚ್ಚಾಗಿರುವ ಅದರ ಸಾಹಿತಿ ವರ್ಗ ಮತ್ತು ಕೇವಲ ಸಾಹಿತ್ಯದ ಮಟ್ಟಿಗಷ್ಟೇ ಸೀಮಿತಗೊಂಡ ಅವರ ಕ್ರಾಂತಿ ಕಾರಿತನ. ಈ ಮೂರು ಕಾರಣಗಳನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸಬಯಸುತ್ತೇನೆ. ನವ್ಯ ಮಾರ್ಗದ ಸಾಂಕೇತಿಕ ಶೈಲಿ ಮತ್ತು ತಂತ್ರಗಳು ಮೊದಲನೇಯದಾಗಿ ಸಾಹಿತ್ಯದ ಅನೇಕ ಸಾಮಾಜಿಕ ಜವಾಬ್ದಾರಿಗಳ ಬಗ್ಗೆ ಸಾಹಿತಿಗಿರುವ ತಿರಸ್ಕಾರವನ್ನು ತೋರಿಸುತ್ತದೆ. ನಮ್ಮ ರಾಷ್ಟ್ರೀಯ ಉತ್ಪಾದನೆಯ ಬಹುಪಾಲನ್ನು ಉಚ್ಚವರ್ಗ ಮತ್ತು ಜಾತಿಗಳು, ಮಿಕ್ಕುವುದನ್ನು ಮಧ್ಯಂತರ ವರ್ಗ ಮತ್ತು ಜಾತಿಗಳು ತಿಂದು ಹಾಕುತ್ತಿರುವುದರಿಂದ ಾಕ್ಷರತೆ ನಿರೀಕ್ಷಿತ ಗತಿಯಲ್ಲಿ ವೃದ್ಧಿಸಿಯೇ ಇಲ್ಲ. ಈ ಕಾರಣದಿಂದಲೇ ಭಾರತದ ಗ್ರಾಮಗಳಲ್ಲಿ ಹೆಬ್ಬೆಟ್ಟೊತ್ತುವ ಪಶುಸದೃಶ ಶೂದ್ರ ಸಮುದಾಯವೊಂದನ್ನು ನಿರ್ಮಾಣ ಮಾಡುತ್ತಿದ್ದೇವೆ. ಸಾಹಿತ್ಯದಲ್ಲಿ ರುಚಿಯನ್ನು ಮೇಲು ಜಾತಿ ಮತ್ತ ವರ್ಗದವರೇ ಸ್ವತ್ತಾಗಿ ಉಳಿಸುವ ಯತ್ನ ನಮ್ಮ ವಿದ್ಯಾಭ್ಯಾಸದ ಯೋಜನೆಗಳು ಮತ್ತು ವಿದ್ಯಾಭ್ಯಾಸದ ಕ್ರಮ. ಭಾಷೆಯು ಹೇಗೆ ಕೇವಲ ಉಳ್ಳವರ ಸೊತ್ತು ಮಾತ್ರವೇ ಆಗ ತೊಡಗಿದೆಯೆಂದರೆ ಈಗ ಭಾಷೆಯಲ್ಲಿ ಆಲೋಚನೆ ಮತ್ತು ಅನುಭವಗಳ ಅಭಿವ್ಯಕ್ತಿ ಬಯಸುವುದೇ ಮೋಸಗಾರಿಕೆಯಾಗುವ ಹೊತ್ತು ಬರುತ್ತಿದೆ. ಅಂಥದರಲ್ಲಿ ಸಾಹಿತ್ಯದಲ್ಲೂ ನಾವು ಯಾಂತ್ರಿಕ ಸಾಂಕೇತಿಕತೆಯನ್ನು ಸಂಪ್ರದಾಯ ಮಾಡಿಕೊಂಡು ಸಹೃದಯ ಸ್ತೋಮವನ್ನು ಸೀಮಿತಗೊಳಿಸಿಕೊಳ್ಳುವುದೇ ಸಾಹಿತ್ಯ ರಚನೆಯ ಉದ್ದೇಶಗಳಲ್ಲಿ ಒಂದಾಗಿ ಮಾಡಿಕೊಂಡರೆ ಅದು ರೋಗಗ್ರಸ್ತ ನಾಗರೀಕತೆಯ ಪಾರಕಾಷ್ಠ ಎಂದಷ್ಟೇ ಹೇಳಬಹುದು.

ಎರಡನೆಯದು ಉಪಧ್ಯಾಯರಿಂದಲೇ ಆಗುವ ಸಾಹಿತ್ಯ ಸೃಷ್ಟಿ. ಇಡೀ ಒಂದು ಭಾಷಾ ಸಮುದಾಯದ ಅಭಿವ್ಯಕ್ತಿಯಾಗಬೇಕಾದ ಸಾಹಿತ್ಯ ಕೇವಲ ಪಾಠ ಹೇಳುವವರ ಕುಲಕಸುಬಿನಂತಾದರೆ ಅದು ಎಷ್ಟು ಉಪಾಧ್ಯಾಯರ ಮೇಲಿನ  ವೃತ್ತಿಯ ಕನ್ನಡ ಜಾನಪದದ ಬಿಟ್ಟು, ಅನುಭವದ ವಿಸ್ತೀರ್ಣಗಳಲ್ಲಿ ಏಕತಾನತೆ, ಅನುಭವ ಶೈಲಿ, ಮುಂತಾದುಗಳ ಪುನರಾವರ್ತನೆ ಪಾಶ್ಚಿಮಾತ್ಯ ಕೃತಿಗಳ ಎರವಲು ಪಡೆದ ರಚನೆ, ಮತ್ತು ಪ್ರಕಾಶಕ ವಿಮರ್ಶಕ ಮತ್ತು ಬರಹಗಾರರೊಡಗೂಡಿದ ವಂಚಕ ಜಾಲಗಳು; ಇದಕ್ಕೆಲ್ಲ ಈ ಮೂರು ವಿಶ್ವವಿದ್ಯಾನಿಲಯ ಹಾಗೂ ಕಾಲೇಜುಗಳ ವೃತ್ತಿಯೊಳಗಿರುವ ವರ್ಗ, ಬಡ್ತಿ, ನೇಮಕ, ಪಠ್ಯ ಪುಸ್ತಕ ಇತ್ಯಾದಿಗಳ ಕೆಟ್ಟ ರಾಜಕಾರಣದಲ್ಲಿ ಮುಳಗಿಸುವ ಉಪಾಧ್ಯಾಯ ಸಾಹಿತಿಗಳ ಸಮುದಾಯವೇ ಕಾರಣ. ನಿಜವಾಗಿಯೂ ಸಹಾನುಭೂತಿಗೆ ಬಾಧ್ಯರಾದ ಗೌರವಾನ್ವಿತ ಉಪಾಧ್ಯಾಯರ ಮೇಲೆ ಟೀಕಿಸುವ ಅಗತ್ಯವಿರಲಿಲ್ಲ. ಆದರೆ ಈಚಿನ ವಿದ್ವತ್ ಗೋಷ್ಠಿಗಳಲ್ಲಿ,

---

೯. ಡಿ.ಆರ್. ನಾಗರಾಜ: ನವ್ಯ ಚಳುವಳಿ; ಕೆಲವು ಚೆಲ್ಲಾಪಿಲ್ಲಿ ಚಿಂತನೆಗಳು, ೧೯೮೯, ಪುಟ - ೧೧೩

ವಿಮರ್ಷೆಯಲ್ಲಿ ಚರ್ಚೆಯ ಸಮಾವೇಶಗಳಲ್ಲಿ, ಅತಿ ನಾಜೂಕಿನ ವಾತಾವರಣವೊಂದನ್ನು ಸೃಷ್ಟಿಮಾಡಿ ಕೇವಲ ಆತ್ಮ ಗೋಚರ ಮಾತ್ರವಾದ ವಿಮರ್ಶೆಯ ಪಾರಿಭಾಷಿಕ ಶಬ್ದ ಸರಣಿಗಳನ್ನು ಸೃಷ್ಟಿಸಿ ನೇರವಾದ, ಸರಳವಾದ ಅನ್ಯಕ್ಷೇತ್ರದ ವ್ಯಕ್ತಿಗಳು ಸಾಹಿತ್ಯ ಕ್ಷೇತ್ರದಿಂದ ಸಂಕೋಚಗೊಂಡು ಓಡಿಬಿಡುವಂತೆ ಅತಿ ಸುಸಂಸ್ಕೃತಿಯ ಮೆಣಸಿನ ಹೊಗೆ ಹಾಕಿದ್ದಾರೆ.

ಮರನೆಯದು ಕೇವಲ ಸಾಹಿತ್ಯದ ಮಟ್ಟಿಗೇ ಸೀಮಿತಗೊಂಡ ಕ್ರಾಂತಿಕಾರಕತನ. ನವ್ಯ ಕಾವ್ಯದ ಸ್ಫೂರ್ತಿ ಮೂಲಗಳು ಆಂಗ್ಲ ಕಾವ್ಯದಿಂದ ಎರವಲು ತಂದ ಸಿದ್ಧಾಂತಗಳಿಂದ ಮಾತ್ರವೆಂದು ಹೇಳಬೇಕಾಗಿದೆ. ಏಕೆಂದರೆ ಆ ವಿಚಾರ ನಮ್ಮ ಜೀವನದ ಯಾವುದೇ ಇತರ ಕ್ಷೇತ್ರಗಳಿಗೂ ಹಬ್ಬಲು ಸೋತು ಹೋಗಿದೆ. ಕನ್ನಡ ಸಾಹಿತ್ಯದ ಎಲ್ಲಾ ಕ್ರಾಂತಿಗಳೂ ಕೂಡ ಇದೇ ರೀತಿ ಸಾಹಿತ್ಯಿಕ ಕ್ರಾಂತಿ ಮಾತ್ರವಾಗಿ ಮುಗ್ಗರಿಸುದಕ್ಕೆ ಮೂಲಕಾರಣ ಇವುಗಳ ಮುಂಚೂಣಿಯಲ್ಲಿ ನಿಂತವರು ಬ್ರಾಹ್ಮಣರು, ಅದ್ದರಿಂದ ಹಳೇ ಸಾಹಿತ್ಯಕ್ಕೂ ಹೊಸ ಸಾಹಿತ್ಯಕ್ಕೂ ನಡುವಿನ ಘರ್ಷಣೆ; ಹಳೆ ಸಂಪ್ರದಾಯ, ಆಚಾರ, ಪರಂಪರೆ ಮುಂತಾದವುಗಳೆಲ್ಲದರ ವಿರುದ್ಧವಾಗಿ ಆಂದೋಲನವಾಗಲಿಲ್ಲ. ಆದ್ದರಿಂದಲೇ ಕನ್ನಡ ಸಾಹಿತ್ಯ ಚಳುವಳಿಯು ತಮಿಳಿನಲ್ಲಿಯಂತೆ ಭಾಷೆ, ಜಾತಿ ಪದ್ಧತಿ, ತತ್ವ ರಾಜಕೀಯ ಆಂದೋಲನ ಮುಂತಾದ ಎಲ್ಲಾ ಕ್ಷೇತ್ರಗಳ ವರೆಗೂ ಹಬ್ಬಲಿಲ್ಲ. ನವ್ಯ ಕಾವ್ಯ ರಚನೆಯಲ್ಲಿ ಕ್ರಾಂತಿಕಾರಿಗಳಾದರೂ ಜಾತಿ ಪದ್ಧತಿ, ವರ್ಣಾಶ್ರಮ ಧರ್ಮ ಮುಂತಾದುವುಗಳನ್ನು ಪ್ರತಿಪಾದಿಸಿದರು. ಜನ ಬಳಕೆ ಆಡುಮಾತಿನಲ್ಲಿ ಕಾವ್ಯ ಬರೆಯಬೇಕೆಂದವರು ಶಿಕ್ಷಣ ಕ್ರಮವನ್ನು ಮಾತ್ರ ಇಂಗ್ಲೀಷ್‌ನಲ್ಲಿಯೇ ಮಂದುವರೆಸಬೇಕೆಂದರು. ನವ್ಯ ಸಾಹಿತ್ಯದ ಈಚಿನ ಕವನಗಳು ಬಹುಪಾಲು ಧಾರ್ಮಿಕ ಹಾಗೂ ರಿಲೀಜಿಯಾಸ್ ಆಗಿರುವುದೇ ಹೆಚ್ಚು. ಉದಾರ ಮತ್ತು ವಿಶಾಲ ಮನೋಭಾವನೆಗಳಿರುವ ಧರ್ಮಗಳಿಗೆ ಸಂಬಂಧಿಸಿದವರು ಧಾರ್ಮಿಕ ಕವಿಗಳು, ಶ್ರೇಷ್ಠ ಕವಿಗಳೂ ಆಗಬಹುದೇನೋ! ಆದರೆ, ಭಾರತದಲ್ಲಿ ರಿಲೀಜಿಯಸ್ ಆಗುವ ಕವಿ ಜನತಾದ್ರೋಹಿಯಾಗುತ್ತಾನೆ. ಏಕೆಂದರೆ ಭಾರತೀಯ ಬಹುಪಾಲು ಧರ್ಮಗಳೆಲ್ಲಾ ಮಾನವೀಯತೆಗೆ ವಿರೋದ."[೧೦]

ಈ ಮೂರು ಕಾರಣಗಳಿಂದ ಈ ಸಾಹಿತ್ಯ ಸಂಪ್ರದಾಯ ಅವನತಿ ಹೊಂದಿದೆ. ಅದ್ದರಿಂದಲೇ ಈ ಮಾರ್ಗವನ್ನು ತ್ಯಜಿಸುವುದಷ್ಟೇ ಅಲ್ಲದೆ ಇದರ ಸ್ಫೂರ್ತಿ ಮೂಲಗಳು, ಇದರ ಅಭಿವೃದ್ಧಿ ಪರಿಕರಗಳು, ಇದರ ಮೌಲ್ಯಗಳು ಎಲ್ಲವನ್ನೂ ತ್ಯಜಿಸಬೇಕಾಗಿದೆ. ಎಂದರೆ, ರಾಜಕೀಯವಾಗಿ, ಸಾಮಾಜಿಕವಾ, ತಾತ್ವಿಕವಾಗಿ ಸಮಗ್ರವಾಗಿ ಬದಲಾವಣೆಯಾಗುವುದರಿಂದ ಮಾತ್ರವೇ ನಿಜವಾದ ಹೊಸ ಸಾಹಿತ್ಯ ಹೊರಬರುತ್ತದೆ.

## ೨. ತೆಲುಗಿನ ದಿಗಂಬರ ಸಾಹಿತ್ಯ

೧೯೬೫ ರಿಂದ ಈಚೆಗೆ ಆಂಧ್ರ ಪ್ರದೇಶದಲ್ಲಿ ಬಹುವ್ಯಾಪಕವಾಗಿ ಬೆಳೆದುಬಂದ 'ದಿಗಂಬರ ಕಾವ್ಯ'ವು ಕನ್ನಡ ದಲಿತ ಸಾಹಿತ್ಯಕ್ಕೆ ಸಾಕಷ್ಟು ಪ್ರೇರಣೆ ನೀಡಿದೆ. ಈ ಪ್ರೇರಣೆಯನ್ನು ಬಹಳ ಸುಸ್ಪಷ್ಟವಾಗಿ ಗುರುತಿಸುವುದು ಕಷ್ಟವಾದರೂ ದಲಿತ ಬರಹಗಾರರು ಆಗಾಗ ಚೆರಬಂಡರಾಜು, ನಗ್ನ ಮುನಿ, ಭೈರವಯ್ಯಾ, ನಿಖಿಲೇಶ್ವರ, ಮಹಾಸ್ವಪ್ನ ಮತ್ತು ಜ್ವಾಲಾಮುಖಿ ಇವರನ್ನು ನೆನಪಿಸಿಕೊಳ್ಳುವುದುಂಟು. ಒಮ್ಮೆ ಭಿಕ್ಷುಕಿಯಿಂದ ಒಮ್ಮೆ ಹೋಟೇಲ್ ಕ್ಲೀನರ್‌ನಿಂದ, ರಾತ್ರಿ ಹೊತ್ತಿನಲ್ಲಿ, ಬೀದಿಯಲ್ಲಿ ಕೃತಿ ಬಿಡುಗಡೆ ಮಾಡಿದ ದಿಗಂಬರ ಕವಿಗಳು ಹೈದಾರಾಬಾದ್ ಕರ್ನಾಟಕ ಪ್ರದೇಶದ ದಲಿತ ಲೇಖಕರ ಮೇಲೆ ಆಗಾಧ ಪರಿಣಾಮ ಬೀರಿದ್ದಾರೆ. ದಲಿತ ಸಾಹಿತ್ಯ ವೇದಿಕೆಗಳಲ್ಲಿ ದಿಗಂಬರ ಕವಿಗಳು ಕಾಣಿಸಿದ್ದುಂಟು.

---

೧೦. ಪೂರ್ಣಚಂದ್ರ ತೇಜಸ್ವಿ : ಅಬಚೂರಿನ ಪೋಸ್ಟಾಫೀಸಿಗೆ ಬರೆದ ಮುನ್ನುಡಿಯಲ್ಲಿ, ೧೯೮೩ ಪುಟ - VIII, X.

## ೩. ಮರಾಠಿ ದಲಿತ ಸಾಹಿತ್ಯ ಚಳುವಳಿಯ ಪ್ರೇರಣೆ

೧೯೬೭ ರಿಂದೀಚೆಗೆ ಮಹಾರಾಷ್ಟ್ರದ್ದಲ್ಲಿ ಜನಪ್ರಿಯವಾದ ದಲಿತ ಸಾಹಿತ್ಯ ಚಳುವಳಿಯು ಕನ್ನಡಿಗರ ಮೇಲೆ ಅದರಲ್ಲೂ ಮುಖ್ಯವಾಗಿ ದಲಿತರ ಮೇಲೆ ತನ್ನ ಗಾಢ ಪ್ರಭಾವ ಬೀರಿದೆ. ಈ ಮಾತು ಮುಖ್ಯವಾಗಿ ಅಂಬೇಡ್ಕರರ ಜನಪ್ರಿಯತೆಯಿಂದಲೂ ಸಂಬಂಧ ಹೊಂದಿದು. ದಲಿತರಿಗೆ ಅಂಬೇಡ್ಕರ್ ಅವರೇ ನಾಯಕರಾದುದರಿಂದ ಈ ಪ್ರಭಾವವೂ ಅನಿವಾರ್ಯವಾಯಿತು. ಈ ಮಧ್ಯೆ ಬಾಬುರಾವ್ ಬಾಗುಲ್, ಮನೋಹರ ವಾಂಖೇಡೆ, ದಯಾಪವಾರ್, ನಾಮದೇವ ಢಸಾಳ, ಲತೀಫ, ಕೆಶವ ಮಶ್ರಾಮ್, ವಾಮನ್ ನಿಂಬಾಳ್ಕರ್, ಅರುಣ್ ಕಾಂಬ್ಳೆ ಮುಂತಾದವರ ಬರಹಗಳಿಂದ ಕರ್ನಾಟಕದ ಜನಪರ ಚಳುವಳಿಗಳು ಸಾಕಷ್ಟು ಪ್ರೇರಣೆ ಪಡೆದಿದೆ. ಅರುಣ್ ಕಾಂಬ್ಳೆಯಂತಹ ಈಚಿನ ನಾಯಕರು ಕರ್ನಾಟಕ ದಲಿತ ಸಂಘರ್ಷ ಸಮಿತಿಯ ವೇದಿಕೆಯಲ್ಲಿ ಈಗಲೂ ಭಾಗವಹಿಸುತ್ತಿದ್ದಾರೆ.

ಹೀಗೆ ಕನ್ನಡ ದಲಿತ ಸಾಹಿತ್ಯದ ಮೇಲೆ ಸಾಹಿತ್ಯೇತರ ಮತ್ತು ಸಾಹಿತ್ಯಿಕ ಪ್ರೇರಣೆಗಳನ್ನು ಮುಖ್ಯವಾಗಿ ಚರ್ಚಿಸಲಾಗಿದೆ. ಇವೆಲ್ಲಾ ಅಲ್ಲದೆ ಇನ್ನು ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಪ್ರೇರಣೆ ನೀಡಿದ ಇನ್ನೂ ಹಲವು ವಿಚಾರಗಳೂ ಇರಬಹುದು. ಅವುಗಳೆಲ್ಲವನ್ನು ಇಲ್ಲಿ ವಿವರಿಸಲು ಕಷ್ಟಸಾಧ್ಯ. ಆದ್ದರಿಂದ ಮೇಲಿನ ಪ್ರಮುಖವಾದವುಗಳನ್ನು ಮಾತ್ರ ವಿವರಿಸಲಾಗಿದೆ.

# ದಲಿತ ಸಾಹಿತ್ಯದ ವಿವಿಧ ಪ್ರಕಾರಗಳು

ಕನ್ನಡ ಸಾಹಿತ್ಯದ ಇತರ ಸಾಹಿತ್ಯ ಘಟ್ಟಗಳಂತೆ ದಲಿತ ಸಾಹಿತ್ಯ ಯುಗದಲ್ಲಿ ಕನ್ನಡ ಸಾಹಿತ್ಯದ ಮುಖ್ಯ ಪ್ರಕಾರಗಳಾದ ಕಾವ್ಯ, ಮಹಾಕಾವ್ಯ ಕಾದಂಬರಿ, ಸಣ್ಣ ಕಥೆ, ನಾಟಕ ಆತ್ಮಕಥೆ, ವಿಮರ್ಶೆಗಳು ಸಾಹಿತ್ಯ ಶಾರದೆಯ ಮಡಿಲು ಸೇರಿದವು. ಇವುಗಳನ್ನು ಒಂದೊಂದು ಪ್ರತ್ಯೇಕ ಶೀರ್ಷಿಕೆಯಡಿಯಲ್ಲಿ ವಿಶ್ಲೇಷಣೆ ಮಾಡುವುದು ಸೂಕ್ತವೆನಿಸುತ್ತದೆ.

## ದಲಿತ ಕಾವ್ಯ

ಆಧುನಿಕ ದಲಿತ ಕಾವ್ಯವು, ಪಿ. ಗೋವಿಂದ ದಾಸರಿಂದ ಪ್ರಾರಂಭವಾಗಿದ್ದರೂ ಕೂಡ ಅದು ಚಳುವಳಿಯ ಕಾವ್ಯವಾಗಿ ಮೊಟ್ಟಮೊದಲು ಪ್ರಕಟವಾದದ್ದು. ಡಾ. ಸಿದ್ಧಲಿಂಗಯ್ಯನವರ 'ಹೊಲೆಮಾದಿಗರ ಹಾಡು' ಕವನ ಸಂಕಲನದ ಮೂಲಕ ಎಂಬುದು ಸ್ಪಷ್ಟ.

ಹಾಸನದ ಚನ್ನರಾಯ ಪಟ್ಟಣ ತಾಲ್ಲೂಕಿನ ದಮ್ಮನಿಂಗಳದಲ್ಲಿ ೧೯೦೪ ರಲ್ಲಿ ಜನಿಸಿ ೧೯೩೨ ರಲ್ಲಿ 'ಹರಿಜನ ಅಭ್ಯುದಯ' ವೆಂಬ ಕವನ ಸಂಕಲವನ್ನು ಗೋವಿಂದದಾಸ ಅವರು ಪ್ರಕಟಿಸಿದ್ದಾರೆ. ಗೋವಿಂದ ದಾಸ ಅವರು ಬೇಲೂರು ತಾಲ್ಲೂಕಿನ ಶಾಸನಕರಾಗಿದ್ದರು. ಇವರು ಕಾವ್ಯ ರಚಿಸಿದ ಸಂದರ್ಭದಲ್ಲಿ ದಲಿತ ಸಂಘರ್ಷ ಸಮಿತಿ ಹುಟ್ಟಿಯೇ ಇರಲಿಲ್ಲ. ಹೀಗಾಗಿ ಚಳುವಳಿಗೂ ಈ ಕವಿಗೂ ಯಾವುದೇ ಸಂಬಂಧವಿರಲಿಲ್ಲ. ದಲಿತರ ನೋವು ಸಂಕಟಕಗಳನ್ನು ಹೊತ್ತು ತಂದ ದಲಿತ ಚಳುವಳಿಯ ಮೊದಲ ಕಾವ್ಯ 'ಹೊಲೆಮಾದಿಗರ ಹಾಡು' ಎಂಬುದನ್ನು ಮರೆಯುವಂತಿಲ್ಲ.

'ಹೊಲೆ ಮಾದಿಗರ ಹಾಡು' ಸಿದ್ಧಲಿಂಗಯ್ಯನವರ ಇಪ್ಪತ್ತು ಕವನಗಳ ಸಂಕಲನವ ಆಗಿದೆ. ಈ ಸಂಕಲನದ ಕವನಗಳನ್ನು 'ಹಾಡುಗಳು' ಎಂದು ಕರೆದುಕೊಂಡ ಸಿದ್ಧಲಿಂಗಯ್ಯ ಸಂಕಲನದ ಆರಂಭದಲ್ಲಿ "ಇವನ್ನು ಗಟ್ಟಿಯಾಗಿ, ಲಯಬದ್ಧವಾಗಿ ಹಾಡಿದಾಗ, ಓದಿಕೊಂಡಾಗ ಮಾತ್ರ ನನ್ನ ರಚನೆಯ ಉದ್ದೇಶ ಸ್ಪಷ್ಟವಾಗುತ್ತದೆ"[೧] ಎಂದು ಬರೆದುಕೊಂಡರು. ಇಲ್ಲಿ ನವ್ಯದ ಅಂತರ್ಮುಖೀ ರಚನೆಗಳನ್ನು ತಿರಸ್ಕರಿಸುವ ಉದ್ದೇಶವಿದೆ. ಈ ಉದ್ದೇಶದೊಂದಿಗೇ ಹೊಸಾಕೃತಿ ಸಿದ್ಧಗೊಳ್ಳುತ್ತಲೇ ಶತಮಾನಗಳಿಂದ ತುಳಿತಕ್ಕೊಳಗಾಗಿದ್ದ ದಲಿತರ ನೋವು, ತಳಮಳ, ಸಿಟ್ಟು, ದುರಂತ ಮೊದಲಾದವುಗಳು. ಮೊದಲಾದವರಿಗೆ ಸಿಟ್ಟು ಕಾರುತ್ತಾ ಅಕ್ಷರ ಲೋಕವನ್ನು ಪ್ರವೇಶಿಸಿದವು. ಈ ಸಂಕಲನವು ಕನ್ನಡ ಬರವಣಿಗೆಗೆ ಅರ್ಥಪೂರ್ಣವಾದ ಹೊಸದಿಕ್ಕನ್ನು ತೋರಿಸಿಕೊಟ್ಟ ಸಾಂಸ್ಕೃತಿಕ ಮಹತ್ವ ಹೊಂದಿದೆ. ಗಾಂಧೀಜಿ ರಮ್ಯಗೊಳಿಸಿಬಿಟ್ಟದೆ 'ಹರಿಜನ' ಪದದ ನಿರಾಕರಣೆಯಲ್ಲಿಯೇ ಈ ಸಂಕಲನ. ಕ್ರಾಂತಿಕಾರಿಯಾಗಿ ಬಿಟ್ಟಿತು. ದಲಿತರ ಬದುಕಿನ ಶೋಷಕರ ವಿರುದ್ಧ ಸಿಟ್ಟು, ಅದನ್ನು ಧ್ವಂಸ ಮಾಡಿಬಿಡಬೇಕೆಂಬ ಅದಮ್ಯ ಉತ್ಸಾಹ, ತನ್ನ ಜನರ ಅಜ್ಞಾನ ಮತ್ತು ಹೆಡ್ಡತನಕ್ಕಾಗಿ ನೋವು, ಬೇಸರ, ದಲಿತರನ್ನು ಸಂಘರ್ಷಕ್ಕೆ ಪ್ರಚೋಧಿಸುವ ಬಯಕೆ, ಕ್ರಾಂತಿಯ ಬಗ್ಗೆ ಅಚಲವಾದ ನಂಬಿಕೆ ಇವೆ ಮುಂತಾದವು ಇವರ ಕಾವ್ಯದ ಪ್ರಧಾನ ಪ್ರೇರಣೆ ಮತ್ತು ವಸ್ತು. ನವೋಯದಿಂದ ಲಯವನ್ನು ಜಾನಪದ

---

೧. ಸಿದ್ಧಲಿಂಗಯ್ಯ : ಹೊಲೆ ಮಾದಿಗರ ಹಾಡು ಗೆ ಬರೆದ ಮುನ್ನುಡಿಯಲ್ಲಿ, ೧೯೮೪, ಪುಟ- ii.

ಕಾವ್ಯದಿಂದ ಪದ ಸಮುಚ್ಛಯವನ್ನು ತೆಗೆದುಕೊಂಡು ತಮ್ಮ ಅಭಿವ್ಯಕ್ತಿಗೆ ಜೀವ ತುಂಬಿದರು. ತನ್ನ ನೆಲದ ಪರಿಸರ ಮತ್ತು ತನ್ನ ಜನರ ಭಾಷೆಯನ್ನೇ ಬಳಸಿ ತಮ್ಮದೇ ಆದ ಒಂದು ಹೊಸ ಅಭಿವ್ಯಕ್ತಿ ಮಾರ್ಗ ಸೃಜಿಸಿಕೊಂಡರು. ಈ ಸಂಕಲನದ 'ಒಂದು ಪದ' ಕವಿತೆಯನ್ನು ಗಮನಿಸಬೇಕು.

" ಇಕ್ರಲಾ ವದೀಲ್ಲಾ
ಈ ನನ್ನ ಮಕ್ಕಳ ಚರ್ಮ ಎಬ್ಬಾಲಾ
ದೇವ್ರು ಒಬ್ನೇ ಅಂತಾರೆ
ಓಣಿಗೊಂದು ತರಾ ಗುಡಿ ಕಟ್ಟವ್ರೆ
ಎಲ್ಲಾರು ದೇವ್ರು ಮಕ್ಳು ಅಂತಾರೆ
ಹೋಲೇರ್ನ ಕಂಡ್ರೆ ಹಾವ್ ಕಂಡಂಗಾಡ್ತಾರೆ "[೧]

ಇಲ್ಲಿ ಆರಂಭದಲ್ಲಿನ ಆಕ್ರೋಶ, ಸಿಟ್ಟು, ಮತ್ತು ದಲಿತರನ್ನು ನೋಯಿಸುತ್ತಿದ್ದವರ ಬಗ್ಗೆ ಇರುವ ಅಗಾಧ ಕೋಪ ವ್ಯಕ್ತವಾಗಿದೆ. ಹಾಗೂ ಅದೇ ಕ್ಷಣದಲ್ಲಿ ದಲಿತರ ಸ್ವಾಭಿಮಾನವನ್ನು ಎಚ್ಚರಿಸುತ್ತದೆ. ನಂತರ ಭಾರತೀಯ ಕಾವ್ಯ ಮೀಮಾಂಸೆ ಪ್ರತಿಪಾದಿಸುವ ಸಾಂಪ್ರದಾಯಿಕ ಉಪಮೇ, ನಾಜೂಕು ತನ, ಕಾವ್ಯ ಕುಸುರಿಗೆಲಸವನ್ನು ತಿರಸ್ಕರಿಸಿ ಅಪಾರ ಚೈತನ್ಯವುಳ್ಳ ಹೊಸ ಉಪಮೆ, ರೂಪಕ, ಪ್ರತಿಮೆಗಳನ್ನು ಕಾವ್ಯದಲ್ಲಿ ಬಳಸಿದರು. ಅದನ್ನು ಈ ಸಂಕಲನದ 'ಒಂದು ಮೂಳೆಯ ಹಾಡು' ಕವಿತೆಯಲ್ಲಿ ಕಾಣಬಹುದು.

" ನನ್ ಮೇಲೆ ನಿಂತ್ಕಂಡ್ ತುಳೀತಿರೋ ಈ ಬಂಗ್ಲೆ
ಕೈಳೀಕ್ ಬೀಳಂಗೆ
ಸೌದೆ ಸಿಗದಂಗ್ ಸಿಗಿತಿನ, ಸಾವ್ಕಾರಿ ಮಯ್ಯ
ಕಳ್ಳ ಪಚ್ಚಿ ಬಗಿತಿನಿ, ಕುಟ್ತನಿ
ಗಂಟ್ಮೊಳಿ ಕೊಬ್ಬು
ಕುಡಿತೀನಿ ಗಟಗಟನೆ, ಹ್ಯಂಡ ಕುಡ್ದಂಗೆ
ಸಾವ್ಕಾರಿ ರಕ್ತನ
ನಾಮೂಳೆ, ನಾ ಇಂಗೆ ಇರಲ್ಲ
ಕೊಗ್ತಿನಿ, ಸಿಡಿತಿನಿ, ಮುಷ್ಯ ಆಯ್ತಿನಿ "[೨]

ಹೀಗೆ ಸಮಕಾಲೀನ ಜಗತ್ತು ಈ ರೀತಿಯ ಪದ ಬಳಕೆ ಕಂಡು ಬೆಚ್ಚಿಬಿದ್ದಿರಲೂಬಹುದು ಇದು ಸತ್ಯ ಏಕೆಂದರೆ ಇಲ್ಲಿ ನಾವು 'ಮನುಷ್ಯ ಆಯ್ತಿನಿ' ಎನ್ನುವ ಮಾತು ಗಮನಿಸಿದಾಗ ಈ ವರೆಗೆ ದಲಿತರನ್ನು ಈ ಸಮಾಜದ ಮೇಲ್ವರ್ಗಗಳು ಮನುಷ್ಯರನ್ನಾಗಿ ನೋಡಿಲ್ಲ ಎಂದು ಸಾರುವಂತೆಯೇ ಇನ್ನಾದರೂ ನಾವು ಮನುಷ್ಯರಾಗುವ ಎಂದು ಕವಿ ದಲಿತರನ್ನು ಎಚ್ಚರಿಸುತ್ತಾರೆ. ಅದು ದಲಿತ ಸಮಾಜದ ವಾಸ್ತವದ ಬದುಕನ್ನು ಚಿತ್ರಿಸುತ್ತದೆ. ಹಾಗೆಯೇ ಇಡಿ ಸಮುದಾಯವನ್ನು ಕುರಿತು ಬರೆಯುವಾಗ ಮಾತ್ರ ಭಾಷೆ ಶಿಷ್ಟವಾಗಿಯೆ ಇರುತ್ತದೆ. ಇದನ್ನು ನಾವು ಇದೇ ಕವನ ಸಂಕಲನದ 'ನನ್ನ ಜನಗಳು' ಎಂಬ ಕವನದಲ್ಲಿ ಗಮನಿಸಬಹುದು.

---

೧. ಸಿದ್ಧಲಿಂಗಯ್ಯ : ಮೆರವಣಿಗೆ, ಅಂಕಿತ ಪುಸ್ತಕ, ಬೆಂಗಳೂರು, ೨೦೦೦, ಪುಟ - ೫೯
೨. ಸಿದ್ಧಲಿಂಗಯ್ಯ : ಮೆರವಣಿಗೆ, ಅಂಕಿತ ಪುಸ್ತಕ, ಬೆಂಗಳೂರು, ೨೦೦೦, ಪುಟ - ೫೮

"ಬಡ್ಡಿಯನ್ನು ತೆತ್ತೋರು ಭಾಷಣಗಳ ಬೆಂಕಿಯಲ್ಲಿ
ಬೆಂದು ಬೂದಿಯಾದೋರು ನನ್ನ ಜನಗಳು,
ಪರಮಾತ್ಮನ ಹೆಸರು ಹೇಳಿ ಪರಮಾನ್ನ ಉಂಡ ಜನಕೆ
ಬೂಟು ಮೆಟ್ಟು ಹೊಲೆದೋರು ನನ್ನ ಜನಗಳು "[೪]

ಹಾಗೆಯೇ ದಲಿತರನ್ನು ಶೋಷಣೆಗೆ ಒಳಗು ಮಾಡಿದ ಸಮಾಚಾರವನ್ನು ನೇರವಾಗಿ ಖಂಡಿಸುವ ಜರಿಯವ ಮಾತುಗಳೂ ಇಲ್ಲಿ ಸಿಗುತ್ತವೆ.

"ದಯಾ ತೆಂಬಿರೊ ನಿಮ್ ಕೊಲೆಗಡುಕ್ರನ
ನಯಾ ತುಂಬಿರೊ ನಿಮಂ ಮಾತ್‌ಗಾರ್ಕೆ
ತಳಗ್ಯಲ್ಲಾ ಕ್ವಳ್ತು ಹುಳಾ ತುಂಬಿರೊ ನೀವೂ
ಏನೂ ಬ್ಯಾಡ.

ತೋಡಿರೋ ಗುಂಡಿಗ್ ನನ್ ಓಡಾಕ್ ಬುಡಿ
ಇಕ್ಕಿರೊ ಬೆಂಕೀಗ್ ನನ್ ಬೀಳಕ್ ಬುಡಿ
ನನ್ ಮಯ್ಯಾಗಿನ ಬಾಡ ಇಸ್ಕಿಸ್ಕೇಕಿತ್
ತಿನ್ ಬ್ಯೆಡಿ, ನಾ ಜೀ ಮೂತ ವಾಹನ ಅಲ್ಲ
ಏ ಗಳ್ಳಗಳಾ"[೫]

ಇಲ್ಲಿ ದಲಿತರ ವೇದನೆ ಮತ್ತು ಅವರಿಗೆ ಮೇಲ್ವರ್ಗಗಳ ಕುರಿತು ಇರುವ ತಿರಸ್ಕಾರ ಎದ್ದು ಕಾಣುತ್ತದೆ.

ಇಲ್ಲಿನ 'ನನ್ನ ಜನಗಳು', 'ಒಂದು ಮೂಳೆಯ ಹಾಡು', 'ಒಂದು ಪದ', ಸತ್ತೋಗೋರಾ, 'ಗಳ್ದಗಳು', 'ಅಡ್ಡಗೂಲಜ್ಜಿಯ ಕಥೆ,' 'ನಗ್ಬೇಕು', 'ಒಂದು ದನದ ಪದ', ಮತ್ತು 'ಹಾವುಗಳೇ ಕಚ್ಚಿ' ಈ ಸಂಕಲನದ ಅತ್ಯುತ್ತಮ ಕವನಗಳಾಗಿವೆ. ಮಾನವೀಯ ದೃಷ್ಟಿಯಲ್ಲಿ ಬದುಕನ್ನು ನೋಡುವ ಹಠ ಮತ್ತು ಜೀವಂತವಾದ ಭಾಷೆ ಇವುಗಳಲ್ಲಿ ಕಾಣುವ ಪ್ರಧಾನ ಗುಣಗಳು.

ಹೀಗೆ 'ಹೊಲೆ ಮಾದಿಗರ ಹಾಡು' ಸಂಕಲನವು ಸಮಕಾಲೀನ ಕನ್ನಡ ಕಾವ್ಯ ಶರೀರಕ್ಕೆ ಹೊಸ ರಕ್ತದ ಭಾಷ್ಯ ಬರೆದು ನಾಡಿನಾದ್ಯಂತ ಚಿಂತನಾಶೀಲ ಸಾಹಿತ್ಯ ಭಾಸಿಗಳೆಲ್ಲರ ಗಮನ ಸೆಳೆದು ಕನ್ನಡ ಕಾವ್ಯ ಮಾರ್ಗದಲ್ಲಿ ಹೊಸ ಆಸೆ, ಭರವಸೆಗಳನ್ನು ಮೂಡಿಸಿದ ಕೃತಿಯಾಗಿದೆ.

ಸಿದ್ಧಲಿಂಗಯ್ಯನವರ ಎರಡನೆ ಸಂಕಲನ 'ಸಾವಿರಾರು ನದಿಗಳು' ಇದರಲ್ಲಿ ಮೊದಲನೇ ಸಂಕಲನದ ಮಿತಿಗಳನ್ನು ಮೀರಿದ ಉತ್ತಮ ಕವನಗಳಿವೆ. ಅಭಿವ್ಯಕ್ತಿ ಮತ್ತು ತಾತ್ವಿಕತೆಯ ನಡುವೆ ಸೃಜನಾತ್ಮಕ ಸಾಮರಸ್ಯ ಸಾಧಿಸಿದ ಕೆಲವು ಮಹತ್ವದ ರಚನೆಗಳಿವೆ. ಇದಕ್ಕೆ ಉತ್ತಮ ಉದಾಹರಣೆಗಳು 'ಸಾವಿರಾರು ನದಿಗಳು' ಎಂಬ ಕವನವೇ ಆಗಿದೆ. ಈ ಕವನದ ಆರಂಭದಲ್ಲಿ ಚಿತ್ರಿತವಾದ ದಲಿತರ ಎಚ್ಚರ;

೪. ಸಿದ್ಧಲಿಂಗಯ್ಯ : ಮೆರವಣಿಗೆ, ಅಂಕಿತ ಪುಸ್ತಕ, ಬೆಂಗಳೂರು, ೨೦೦೦, ಪುಟ - ೫೭
೫. ಸಿದ್ಧಲಿಂಗಯ್ಯ : ಮೆರವಣಿಗೆ, ಅಂಕಿತ ಪುಸ್ತಕ, ಬೆಂಗಳೂರು, ೨೦೦೦, ಪುಟ - ೬೨

"ಕಪ್ಪು ಮುಖ ಬೆಳ್ಳಿ ಗಡ್ಡ ಉರಿಯುತ್ತಿರುವ ಕಣ್ಣುಗಳು
ಹಗಲು ರಾತ್ರಿಗಳನು ಸೀಳಿ ನಿದ್ದೆಯನ್ನ ಒದ್ದರು
ಕಂಬಳಿಗಳು ಕೊರಗಿದವು ಎದ್ದೇಳುವ ರೊಚ್ಚಿಗೆ
ಭೂಕಂಪನವಾಯಿತು ಅವರು ಕುಣಿದ ಹುಚ್ಚಿಗೆ
ಇರುವೆಯಂತೆ ಹರಿವ ಸಾಲು ಹುಲಿಸಿಂಹದ ಧ್ವನಿಗಳು

...................................................................

ಬೀದಿಯಲ್ಲಿ ಗಲ್ಲಿಯಲ್ಲಿ
ಬೇಲಿ ಮಳೆಯು ಮರೆಗಳಲ್ಲಿ
ಯಜಮಾನರ ಹಟ್ಟಿಯಲ್ಲಿ ಧಣಿಕೂರುವ ಪಟ್ಟದಲ್ಲಿ
ಎಲ್ಲೆಯ್ಲೂ ನನ್ನ ಜನ ನೀರಿನಂತೆ ನಿಂತರು" [೧]

ಇಲ್ಲಿನ ಸಾಲುಗಳಲ್ಲಿ ಭಾವ, ಛಂದಸ್ಸು, ಪ್ರತಿಮೆಗಳೆಲ್ಲವೂ ಹೊಚ್ಚ ಹೊಸದಾಗಿ ಕಂಗೊಳಿಸುತ್ತವೆ. ಕವನದ ಮಧ್ಯ ಭಾಗದಲ್ಲಿ ಬರುವ "ನನ್ನ ಜನ ನೀರಿನಂತೆ ನಿಂತರು". ಎಂಬ ಸಾಲಿನಲ್ಲಿ ಪ್ರಕಟವಾಗುವ ಜಾತ್ಯಾತೀತತೆ, ಸಮಾನತೆಯ ಭಾಗವನ್ನು ಪರಿಶೀಲಿಸಬೇಕು. ನೀರು ಸಮಾನತೆಯ ಸಂಕೇತವಾಗಿ ಬಂದು ಆ ಮೂಲಕ ನಾಳಿನ ಕನಸನ್ನು ನಿನ್ನೆಯ ವಾಸ್ತವತೆ ಎಂದು ಬಣ್ಣಿಸಿದ ಈ ಕವನ ದಲಿತರ ಸೃಜನಶೀಲ ಸಾಮರ್ಥ್ಯದ ಅತ್ಯುತ್ತಮ ಪ್ರತಿನಿಧಿಯಾಗಿ.

ಈ ಸಂಕಲನದಲ್ಲಿ ಬರುವ 'ಬೆಲ್ಚಿಯ ಹಾಡು', 'ಕೆಂಪು ಸೂರ್ಯ', 'ದಲಿತರು ಬರುವರು', 'ಬಿದ್ದಾವು ಮನೆಗಳು,' 'ಕಂಡೆ ನನ್ನವಳ ಒಂದು ದಿವಸ' - ಕವನಗಳು ತಮ್ಮ ಒಡಲಿನ ಶಕ್ತಿ ಸಾಮರ್ಥ್ಯದಿಂದಾಗಿ ಮಹತ್ವದ್ದಾಗಿದೆ. 'ಅಲ್ಲೆ ಕುಂತವರೆ' ಎಂಬ ಖಂಡ ಕಾವ್ಯವೂ ಇದೆ.

"ಸುತ್ತ ಮುತ್ತ ಹಸಿರು ಮಳೆ
ಬೆಳೆಯುತ್ತಾರೆ ಬೆಂಕಿ ಬೆಳೆ
ಕಪ್ಪು ಜನರ ತಲೆಯ ಮ್ಯಾಲೆ
ಬಿಳಿ ಬಿಳಿ ಮಡಕೆ
ಪಾತಾಳದ ಆಳದಲ್ಲಿ
ಭರವಸೆಗಳ ಕೋಶದಲ್ಲಿ
ನರಳುತಾದೆ ಉರುಳುತಾದೆ
ಜನರ ಜಂಗುಳಿ " [೨]

ಈ ಖಂಡ ಕಾವ್ಯದ ಪ್ರಯೋಗ ಯಾವ ದಲಿತ ಬರಹದಾರನ್ನು ಆಕರ್ಶಿಸಲಿಲ್ಲ. ಆದರೂ, ಅಲ್ಲಲ್ಲಿ ಕಾವ್ಯ ಖಡ್ಗದಂತೆ ಮಿಂಚುತ್ತದೆ.

---

೧. ಸಿದ್ದಲಿಂಗಯ್ಯ : ಸಾವಿರಾರು ನದಿಗಳು, ಕನ್ನಡ ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು, ೧೯೮೫, ಪುಟ - ೨
೨. ಅದೇ ಪುಟ ೩೧

ಸಿದ್ಧಲಿಂಗಯ್ಯನವರ ಕೊನೆಯ ಸಂಕಲನವೆಂದರೆ 'ಕಪ್ಪು ಕಾಡಿನ ಹಾಡು' ಈ ಸಂಕಲನದಲ್ಲಿ ಮೊದಲಿನಂತೆ ಆಕ್ರೋಶ, ಸಿಟ್ಟು, ಆವೇಶದಿಂದ ಕೂಡಿದ ಕವನಗಳಿಲ್ಲ. ಅದಕ್ಕೆ ಪರ್ಯಾಯವಾಗಿ ಬೇರೇನನ್ನೋ ಕೊಡಲು ಯತ್ನಿಸಿದರೂ ಅದೂ ಸಹ ಸಾಧ್ಯವಾಗಲಿಲ್ಲ ಎಂದು ನನಗನಿಸುತ್ತದೆ.

"ಗುಡಿಸಲಿನಲ್ಲಿ ಅರಳುವ ಗುಲಾಬಿ
ನಕ್ಷತ್ರ ನನ್ನ ಕವನ "

ಎಂಬಂಥ ಸರಳ ಸಾಲುಗಳು

"ಜಾತಿ ಜಾತಿಯ ನಡುವೆ
ನಿಂತ ಸಾಗರದಲ್ಲಿ
ನಮ್ಮ ಪ್ರೀತಿಯ ಹಡಗು ಮಳುಗಿತಲ್ಲೇ "[೮]

ಎಂಬ ವಾಚ್ಯ ಗದ್ಯ ಮಿಶ್ರಿತ ವಾಕ್ಯಗಳು ಹೆಚ್ಚು ಕಾಣಿಸಿಕೊಂಡಿವೆ. ಬಹುಶಃ ಕವಿಯಾಗಿ ಸಿದ್ಧಲಿಂಗಯ್ಯನವರ ಸಾಧನೆ ಮುಗಿಯಿತೇನೋ ಎಂದು ಸಾರುವ ಸಂಕಲನವಾಗಿ ಬಿಡುತ್ತದೆ. ಆದರೂ ಸಿದ್ಧಲಿಂಗಯ್ಯ ದಲಿತ ಕಾವ್ಯಕ್ಕೆ ದಲಿತ ಚಳುವಳಿಗೆ ಶಕ್ತಿ ನೀಡಿದರು. ತಮ್ಮ ಕವನಗಳ ಮೂಲಕ ದಲಿತ ವರ್ಗವನ್ನು ಎಚ್ಚರಿಸಿ ಸ್ವಾಭಿಮಾನವನ್ನು ಮೆರೆದರು ಎಂಬುದರಲ್ಲಿ ಸಂಶಯವಿಲ್ಲ.

ದಲಿತ ಕಾವ್ಯಗಳಲ್ಲಿ ಇಂಧೂಧರ ಹೊನ್ನಾಪುರ ಅವರ 'ಬಂಡಾಯ'ವೂ ಒಂದು ಪ್ರಮುಖ ಕಾವ್ಯ ಸಂಕಲನವಾಗಿದೆ. ಇದು ಅವರ ಮೊದಲ ಕವನ ಸಂಕಲನವಾಗಿದ್ದು ಹೊಸ ಕಾವ್ಯ ಮಾರ್ಗದ ವಸ್ತುವಿನ ಎಲ್ಲಾ ಲಕ್ಷಣಗಳು ಇಲ್ಲಿ ಪ್ರಕಟವಾಗಿದೆ. ದಲಿತಾನುಭವ ರೋಷವಾಗಿ ಮಾರ್ಪಟ್ಟು, ಹೆಪ್ಪು ಗಟ್ಟಿನಿಂತಿದೆ. ದಲಿತ ಜಗತ್ತಿನಲ್ಲಿ ತುಂಬಿ ತುಳುಕುತ್ತಿರುವ ಬಡತನ, ಸಾಮಾಜಿಕ ಅವಮಾನ, ಶೋಷಣೆ, ಪ್ರತಿಭಟನೆ ಇವೆಲ್ಲವೂ ಇಲ್ಲಿ ಸ್ಪಷ್ಟವಾಗಿ ಪಡಿಮೂಡಿದೆ. ಇವರ ಎಲ್ಲ ಕವನಗಳಾಕೃತಿ ತುಂಬಾ ಸರಳವಾಗಿವೆ. ಅವರಿಗೆ ಶೋಷಿತ ಜನತೆಯ ಮೇಲೆ ಇರುವ ಕಾಳಜಿ ಮಾತ್ರ ಪ್ರತೀ ಕವನದಲ್ಲಿಯೂ ಕೆನೆಗಟ್ಟಿದೆ.

ಚನ್ನಣ್ಣವಾಲಿಕಾರರು ಒಬ್ಬ ಪ್ರಯೋಗಶೀಲ ಕವಿ. 'ಮರದ ಮೇಲಿನ ಗಾಳಿ', 'ಕರಿತಲಿ ಮಾನವ ಜೀಪದ', 'ಹಾಡಕ್ಕಿ ಹಾಗ ಇತರ ಪದ್ಯಗಳು', 'ಪ್ಯಾಂಥರ್ ಪದ್ಯಗಳು' 'ಬಂಡೆದ್ದ ದಲಿತರ ಬೀದಿ ಹಾಡುಗಳು', 'ದಿಕ್ಕಾರದ ಹಾಡುಗಳು' ಇವರು ಈ ವರೆಗೆ ಪ್ರಕಟಿಸಿದ ಕವನ ಸಂಕಲನಗಳಾಗಿವೆ. ಹೋರಾಟದ ಸ್ಫೂರ್ತಿ ನೀಡಲು ಇವರು ಜನಪದ ಶೈಲಿಯಲ್ಲಿ ಹಾಡುಗಳನ್ನು ಬರೆಯುತ್ತಾರೆ. ಇವರ 'ಬಡತನದ ಬಡಾವಾಗ್ನಿ' ಕವನದಲ್ಲಿ ಜಾನಪದ ಓಟ ಗುರುತಿಸಬಹುದು.

"ಎಲ್ಲಿತನ ಕತ್ತಲವು ಬೆಳಗು ಆಗಲೇಬೇಕು
ಚಿಕ್ಕೆಗಳು ಹೊಳೆದಾವ ಮ್ಯಾಗ
ಜಗತ್ತಿನೆಲ್ಲಾ ಕಡೆಗೆ ಮೊದಲ್ಹಿಂಗೆ ಅತ್ತವರೆ
ಗಟ್ಯಾಗಿ ಕುಳಿತಾರ ಈಗ

---

೮. ಸಿದ್ಧಲಿಂಗಯ್ಯ : ಮೆರವಣಿಗೆ, ಅಂಕಿತ ಪುಸ್ತಕ, ಬೆಂಗಳೂರು, ೨೦೦೦, ಪುಟ - ೧೧೯

ಬಡತನದ ಬವಣೆಯಲಿ ಪ್ರೇಮ ಕರ್ಷವೇ ಇಲ್ಲ ಮೋಡ ಬಂದರೆ
ಭೂಮಿ ಹಸಿರು ಹಸಿರು
ಹೊಟ್ಟೆಗಿಲ್ಲದೆ ಹಿಟ್ಟು ರಟ್ಟೆಗಂತ್ಯೆ ಬಲವು ಮಳೆಯು
ಸರಿದಾಗಷ್ಟೆ ಚಿಗುರು ಚಿಗರು"[೯]

ಹೀಗೆ ಅವರ ಕವನ ಸಾಗುತ್ತದೆ. ಇಡೀ ಕವನವು ದಲಿತ ಕೇರಿಯ ಚಿತ್ರಣ ನೀಡುವುದರ ಜೊತೆ ಜನಪದೀಯ ಓಟವನ್ನು ಸಿದ್ಧಸಿಕೊಂಡಿದೆ.

ಮ.ನ. ಜವರಯ್ಯನವರ ಎರಡು ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. 'ಕೇಳು ಜಗಮಾದಿಗ ಹೊಲೆಯ' ದಲಿತರ ಪರ ನಿಲುವನ್ನು ಗಂಭೀರವಾಗಿ ಹೊರ ಸೂಸುವ ವೈಚಾರಿಕ ಕವನಗಳ ಮಾಲೆಯಾಗಿದೆ. 'ಅತ್ತೆ ಸೊಸೆ ಆತ್ಮಕಥೆ' ಎಂಬ ಮತ್ತೊಂದು ಸಂಕಲನದ ಕವನಗಳೆಲ್ಲವೂ ಜನಪರ ರಚನೆಗಳೇ ಆಗಿವೆ. ಅತ್ತೆಯ ಕಾಲ ಮುಗಿದು ಸೊಸೆಯ ಕಾಲ ಆರಂಭವಾಗಿದೆಯೆಂದು ಈ ಕವಿ ಭಾವಿಸುತ್ತಾರೆ.

"ಕುಲತಾಂಡವ ಕಲಾಪದಗ್ನಿ ಬೈರವ ಕಾಲ
ಹದಗೆಟ್ಟ ಬದುಕಿನ ಅತ್ತೆಕಾಲ
ಸೊಸೆಗಿದು ಸೂಕ್ತ ಕಾಲ
ಕಮ್ಮಾರ ಕಾಯದ ಚಿತ್ರ ಮುಗಿಲಲ್ಲಿ
ಇನ್ನಾದರೂ ಮೂಡ ಬೇಕಿದೆ
ಅಕಲಂಕ ತಾರಾ ಮಂಡಲದ ಬೆಳಕು"

ಎಂಬ ಸಾಲುಗಳಲ್ಲಿ ಅವರ ಕಾವ್ಯದ ಧೋರಣೆ ಮತ್ತು ಶಕ್ತಿಯನ್ನು ಮನಗಾಣಬಹುದು. ಸಾಮಾನ್ಯವಾಗಿ ದಲಿತ ಕವಿಗಳಲ್ಲಿ ಕಾಣಬಹುದಾದ ಆಕ್ರೋಶ ಇವರಲ್ಲಿ ಇಲ್ಲ. ಆದರೆ ವ್ಯವಸ್ಥೆಯನ್ನು ವಿರೋಧಿಸಲು ಬೇಕಾದಷ್ಟು ಅಸಮಾಧಾನ, ವ್ಯಂಗ್ಯ, ವಿಷಾದವಿದೆ. ಕೆಲವು ಸಲ ಇಡೀ ಪೌರಾಣಿಕ ಪರಂಪರೆಯನ್ನು ಚಿಥ್ರ ಮಾಡಿ, ತನ್ನದೇ ಒಂದು ನವ ಪರಂಪರೆ ಸೃಷ್ಟಿಸುವ ಅಕ್ಷರ ಶಕ್ತಿ ಇವರಿಗಿದೆ.

ಅರವಿಂದ ಮೂಲಗತ್ತಿಯವರು ಈ ವರೆಗೆ ಪ್ರಕಟಿಸಿರುವ ಮೂಕನಿಗೆ ಬಾಯಿ ಬಂದಾಗ, 'ಕಪ್ಪು ಕಾವ್ಯ', 'ಮೂರನೇ ಕಣ್ಣು', ಈ ಮೂರು ಕವನ ಸಂಕಲನಗಳು ಶಕ್ತಿ ಶಾಲಿ ಮತ್ತು ಸತ್ವಶಾಲೀ ರಚನೆಗಳಾಗಿವೆ. ದಲಿತರ ಭಾಷೆಯನ್ನು ಸೋರೆಗೊಂಡು ಯಥಾವತ್ತಾಗಿ ರಿಚಿಸಿದ ಕೆಲವೇ ಕವಿಗಳಲ್ಲಿ ಇವರು ಪ್ರಮುಖರು.

ಇವರ 'ಮೂಕನಿಗೆ ಬಾಯಿ ಬಂದಾಗ' ಸಂಕಲನದ ಕುತ್ತು ಎಂಬ ಕವನದ ಸಾಲುಗಳನ್ನು ನೋಡಬಹುದು.

"ಹುಟ್ಟು ಬಾರದ್ರೆಪ್ಪೋ ಹುಟ್ಟ ಬಾರ್ದ
ಏಳೇಲ ಜಲ್ಮದಾಗ ಈ ಭೂಮಿ ಮ್ಯಾಗ
ಹೊಲಿ ಮಾದಿಗ್ಯಾಗಿ ಹುಟ್ಟಬಾರ್ದ"[೧೦]

೯. ಚನ್ನಣ್ಣ ವಾಲಿಕಾರ : ಮರದ ಮೇಲಿನ ಗಾಳಿ, ಅಂಕಿತ ಪುಸ್ತಕ, ಬೆಂಗಳೂರು, ೧೯೯೯, ಪುಟ - ೧೨
೧೦. ಎಚ್.ಎಸ್. ರಾಘವೇಂದ್ರರಾವ್ : ಅರವಿಂದ ಮಾಲಗತ್ತಿಯವರ ಆಯ್ದ ಕವನಗಳು, ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೨, ಪುಟ - ೧೬೩

ಎಂಬ ಸರಳವಾದ ಸಾಲುಗಳಲ್ಲಿ ಕವಿಯ ಸಾಮಾಜಿಕ ಅರಿವಿನ ನೆಲೆ ಪ್ರಕಟಗೊಳ್ಳುತ್ತವೆ. ಅವರು ಭಾರತಾಂಬೆಗೆ ಪಾಲುಕೇಳುತ್ತಾರೆ.

"ನಿನ್ನ ಉಡ್ಯಾಗದಿವೆಂದ ಮ್ಯಾಲಿ
ನಾವೂ ನಿನ್ನ ಮಕ್ಕಳ
ನಮಗೂ ಹಕ್ಕ ಐತಿ ಕೇಳ್ತವಿ
ಮಕ್ಕಳನ್ನೊ ಕರುಣಾ ಇದ್ರೆ, ಬಾನಮ್ಮ ಜೋಡಿ
ತಗದೊಗಿ ಯಾರಿಗೆ ಬೇಕು ನಿನ್ನ್ ಆಶೀರ್ವಾದ ಹಸ್ತ
ಹಿಡಿ ಕುಡುಗೋಲು ಕೈಯಾಗ
ಸತ್ಯ ಶಾಂತಿ ಪ್ರೀತಿ ಪ್ರೇಮವನ್ನೋದು
ಮತ್ತೊಂದು ಕೈಯ್ಯಾಗ ಹಿಡದಿ
ಕೊಪ್ಪು ನ್ಯಾಯಾ ............ "[೧೧]

ಎಂಬಲ್ಲಿ ಸಮಾಜದಲ್ಲಿ ಅಸಮಾನತೆಯ ಕ್ರೌರ್ಯತೆ ಹೇಗೆ ದಲಿತರ ಬದುಕನ್ನು ನುಂಗಿ ಹಾಕುತ್ತದೆ ಎಂಬುದನ್ನು ತಿಳಿಯಬಹುದು. ಅದೇ ರೀತಿ ಅವರ "ಜೋಗತಿಕಲ್ಲು",

ಕವನದಲ್ಲಿಯೂ ಅದು ಮುಂದುವರೆಯುತ್ತದೆ.

"ಬರ‍್ತಾವು, ಬರ‍್ತಾವು
ನಾವು ಹೊಲ್ದ ಕಾಲ್ಮರಿ
ನಮ್ಮ ಕೇರ‍್ಯಾಕ ಬರ‍್ತಾವು
ಬೆಳ್ಳಿ, ಚಿಕ್ಕಿ ಜೋಡಿ ಮಟಾ ಮಾಯಾಕ್ಕಾವು"[೧೨]

ಎಂಬ ಸಾಲುಗಳು ಧ್ವನಿಪೂರ್ಣವಾಗಿದ್ದು ಇಲ್ಲಿ ಮುಖ್ಯ ರೂಪಕವಾಗುವ ಕಾಲ್ಮರಿ (ಚಪ್ಪಲಿ) ಇಡೀ ಸಮಾಜದ ಬರ್ಬರತೆಗೆ ಹಿಡಿದ ಕನ್ನಡಿಯಾಗಿದೆ. ಈ ಕಾಲ್ಮರಿದಲಿತರ ಹಣ್ಣುಗಳ ಸ್ಥಿತಿಯನ್ನು ಬಿಂಬಿಸುತ್ತದೆ. ಹೀಗೆ ಈ ಕವನ ಸಂಕಲನದ 'ನನ್ನ ಎದ್ಯಾನ್ ಮಾತು,' 'ನೆರಳು' 'ಮೂಕಮಾತಾಡಿದಾರೆ', 'ಕೆಸರು ಮೊಸರು', 'ಕಳಕೊಂಡವರು', ಕವಿತೆಗಳಲ್ಲಿ ಜವಾನ್ದಾರಿ ಪದ್ಧತಿಯ ಜೀವನದಲ್ಲಿ ದಲಿತರ ಶೋಷಣೆ, ತನ್ನ ಹುಟ್ಟಿನ ಅಸಮಾನತೆಯ ಬಗ್ಗೆ ಸಮಾಜವನ್ನು ದಿಟ್ಟತನದಿಂದ ಪ್ರಶ್ನಿಸುವ ಮೂಲಕ ತನ್ನ ಜನರ ಪರವಾಗಿ ಕಾವ್ಯವನ್ನು ಒಂದು ಮಾಧ್ಯಮವಾಗಿ ಮಾಡಿಕೊಳ್ಳುವುದರ ಜೊತೆಗೆ ನೈಜ ಸಂವೇಧನೆಯನ್ನೂ ಪ್ರಕಟಿಸುತ್ತಾರೆ.

ಮಾಂಗತ್ತಿಯವರ "ಕಪ್ಪುಕಾವ್ಯ" ಸಂಕಲನದಲ್ಲಿ ಅಸ್ತಿತ್ವದ ಪ್ರಶ್ನೆ ಆಗಾಧವಾಗಿ ಬೆಳೆದಿರುವುದನ್ನು ಕಾಣುತ್ತೇವೆ. "ಮೂಕನ ಮಾತುಗಳು ರಾಜಕಾರಣವನ್ನು ಹೆಚ್ಚಿನ ತಿಳುವಳಿಕೆಯ ನೆಲೆಯಲ್ಲಿ ಪರಿಭಾವಿಸುವುದನ್ನು ಕಾಣಬಹುದು. ಯಾರೂ ಬರೆಯದ ಇತಿಹಾಸವನ್ನು ನೋವನ್ನು ಈ ಕವಿತೆಗಳು ಬರೆಯುತ್ತಿವೆ."[೧೩] ಈ ಕಪ್ಪು ಕಾವ್ಯದಲ್ಲಿ ರೋಷಕ್ಕಿಂತ ಮಿಗಿಲಾಗಿ ವಿಷಾದ ಮಡುಗಟ್ಟಿದೆ.

---

೧೧. ಎಚ್.ಎಸ್. ರಾಘವೇಂದ್ರರಾವ್ : ಅರವಿಂದ ಮಾಲಗತ್ತಿಯವರ ಆಯ್ದ ಕವನಗಳು, ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೨, ಪುಟ - ೧೬೫
೧೨. ಅದೇ ಪುಟ - ೧೬೭
೧೩. ಅರವಿಂದ ಮಾಲಗತ್ತಿ : ದಲಿತ ಮಾರ್ಗ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨, ಪುಟ - ೨೮೫

"ಶಬ್ದವಿಲ್ಲದಾ ನಮ್ಮಯ ಹಾಡಿಗೆ
ಉಸಿರುವ ಉಸಿರೆ ಸ್ವರಗಳು
ಚಂಡಮದ್ದಳೆ ವಾದ್ಯವಿಲ್ಲದ
ಕಣ್ಣು ರೆಪ್ಪೆ ತಾಳಗಳು"[೧೪]

ಈ ಸಾಲುಗಳಲ್ಲಿ ಮೌನದ ಮೆರವಣಿಗೆಯಲ್ಲಿ ಸಾಗುವ ಬದುಕಿನ ಲಯವನ್ನು ಹಿಡಿದಿಡುವುದರ ಜೊತೆ ಜೊತೆಗೆ ಆ ಮೆರವಣಿಗೆಯಲ್ಲಿಯೇ ಹಿಂಸೆಯನ್ನು ಹೊತ್ತು ಸಾಗುವ ದಲಿತ ಬದುಕಿನ ಚಿತ್ರಣವಿದೆ. ಜೊತೆಗೆ ಕಪ್ಪು ಕಾವ್ಯದ ಉದ್ದೇಶವಾದಲ್ಲಿ ಏನು ಎಂಬುದನ್ನು 'ಕೋಮುಗಾರಿಕೆ' ಕವಿತೆಯಲ್ಲಿ ಮನಗಾಣಬಹುದು.

"ಕಪ್ಪು ಕಾವ್ಯವು
ಉಫೇ ಉಫೇಯೆಂದು
ಖಡ್ಗ ಲೇಖನಿಯಿಂದ ಉಕ್ಕುತಲಿದ್ದವು
ಕೆಂಪು ಮುಖಗಳ
ಸೆಳೆ ಮಳೆ ಹರಿವ
ಸ್ತೋಮಕೆ ಹರಿವಾಣ ಒಡ್ಡುತಲಿದ್ದವು"

ಹೀಗೆ ಸಾಗುವ ಕವನ ಸಂಕಲನದಲ್ಲಿ 'ನನ್ನ ಜನ', 'ಭೂಮಿಯ ಪ್ರೀತಿ ಗೀತೆ', 'ಬೆಳೆದಾವೋ ಹೋದಲಿತ ಮಕ್ಕಳು', 'ನಮ್ಮ ತಲೆಗಳು', 'ದಲಿತ ಮಕ್ಕಳ ಹಾಡು', 'ಭಾರತದ ಬೆಳ್ಳಿ' ಈ ಕವಿತೆಗಳು ಉತ್ತಮವಾಗಿದ್ದು ಹಾಡುವಿಕೆಗೆ ಸುಲಭವಾಗಿ ಮೈ ಒಡ್ಡುತ್ತವೆ.

"ಮೂರನೆಯ ಕಣ್ಣು" ನಮ್ಮ ಸಮಕಾಲೀನತೆಯ ಸಂದರ್ಭದ ಪ್ರಮುಖ ಅಂಶಗಳ ಹೊಸ ಸಾಧ್ಯೆಗಳ ಕಡೆಗೆ ಮುಖಮಾಡುವ ಕವನಗಳ ಸಂಕಲನ. ಇಲ್ಲಿನ ಹದಿನೇಳು ನೀಳ್ಗವಿತೆಗಳು ಹೊಸ ಕಾಲದ ರೂಪಕದೊಂದಿಗೆ ಪುರಾಣ ಪ್ರತಿಮೆ ಸಂಕೇತಗಳನ್ನು ಬೆಸೆಯುವ ಕೆಲಸವನ್ನು ಮಾಡಿದೆ. ಆದರೆ ಇಲ್ಲಿ ಪ್ರತಿಭಟನೆಯ ಕಾವು ಕಾಣಿಸುವುದಿಲ್ಲ. 'ಚಟ್ಟ ತೊಟ್ಟಿಲ ಭೂಮಿ', ಕವಿತೆಯು ಕಾವ್ಯದ ಎಳೆತನದಿಂದ ಮುದಿತನದ ಬೆಳವಣಿಗೆಯನ್ನು ಸಮಕಾಲೀನ ಬದುಕಿನೊಂದಿಗೆ ಸಮೀಕರಿಸಿ ಹೇಳುತ್ತದೆ.

"ತೊಳೆಯಲಾಗದು ರಕ್ತದ ಕೈ ರಕ್ತದಿಂದ
ಹುಡುಕಬೇಕಿದೆ ಹೊಸ ನೀರಿನ ಸೆಲೆ ಈಗಿಂದ"[೧೫]

ಹಾಗೆಯೇ 'ಗಂಡ ಬೇರುಂಡ' ಕವನದಲ್ಲಿ ಪುರಾಣ ಮತ್ತು ಸಮಕಾಲಿನ ಬದುಕಿನ ಚಿತ್ರಣ ದೊರಕುತ್ತದೆ.

"ಯಜ್ಞದ ಕುದುರೆಗಳನ್ನು ಹಿಡಿದು
ಜಟಕಾ ಬಂಡಿಯ ಕುದುರೆಯಾಗಿಸಲು ಹೋಗಿ
ತಾನೇ ಯಜ್ಞದ ಕುದುರೆಯಾಗಿ ಮೆರೆದು
ಕವಲೆತ್ತಿನ ಬಸವನಾದುದು ಇತಿಹಾಸ [೧೬]"

---

೧೪. ಎಚ್.ಎಸ್. ರಾಘವೇಂದ್ರರಾವ್ : ಅರವಿಂದ ಮಾಲಗತ್ತಿಯವರ ಆಯ್ದ ಕವನಗಳು, ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೨, ಪುಟ - ೧೭೦
೧೫. ಅದೇ ಪುಟ - ೯೪
೧೬. ಅದೇ ಪುಟ - ೯೬

ಹೀಗೆ ಸಾಗುತ್ತದೆ. ಇಲ್ಲಿರುವ 'ವಿದ್ಯುತ್ ತಂತಿಗಳು', 'ಸಾಫ್ಟ್‌ವೇರ್ ಮತ್ತು ಎಮ್ಮೆ', 'ತೀನಿದಾಸ್ಯದ ಕಾಲ,' 'ಭೂಂಗಾ ಮತ್ತು ನೇಗಿಲು', 'ಸಿದ್ಧಾಂತ', 'ಇಳ್ಬಾಗಾನ', 'ಕಡಲುಪ್ಪು ಕಾವ್ಯ' 'ಸಪ್ತಮಾಸಗಳ ತೇರು', 'ಸಮಾಜದ ಹಾಡು' ಮತ್ತು 'ಯುಗಾಂತರಗಳ ಗಾನ' ಕವನಗಳಲೆಲ್ಲಾ ಭಾರತೀಯ ಜೀವನದ ಸಮಕಾಲೀನ ವೈರುಧ್ಯಗಳನ್ನು ದಾಖಲಿಸುತ್ತದೆ. ಇಲ್ಲಿ ಪ್ರತಿಭಟನೆ ಕಾಣವಾಗಿದ್ದು ಹೊಸ ಚಿಂತನೆ, ಹೊಸ ಅಭಿವ್ಯಕ್ತಿಗೆ ಉತ್ತಮ ಉದಾಹರಣೆಯ ಕವನ ಸಂಕಲನವಾಗಿದೆ.

'ಮುನಿವೆಂಕಟ್ಟ' ನವರು ವಿದ್ಯಾರ್ಥಿ ದೆಯೆಯಿಂದಲೇ ಸಾಹಿತ್ಯದ ಗೀಳು ಕೊಂಡವರು. ಇವರು ಕ್ಷೇತ್ರಾಭಿವೃದ್ಧಿ ಅಧಿಕಾರಿಯಾಗಿ ಹಲವಾರು ಕೆಲಸಗಳನ್ನು ಮಾಡಿದರು. ಇವರ ಅಭಿವೃದ್ಧಿ ಸಹಿಸಲಾರದೆ ಇವರ ವಿರುದ್ಧ ಪಿತೂರಿ ಮಾಡಿದೆ ಜನರ ವಿರುದ್ಧ ಬಾಗಿ ನಿಲ್ಲದೆ ತಮ್ಮ 'ಕೆಂಡದ ನಡುವೆ' ಕವನ ಸಂಕಲನ ಪ್ರಕಟಿಸಿದರು. ಹುಟ್ಟಿನಿಂದ ದಲಿತರನ್ನು ಅವರ ನೋವು ನಲಿವುಗಳನ್ನು ತಮ್ಮ ಕೇರಿಯಲ್ಲಿಯೇ ಕಣ್ಣಾರೆ ಕಂಡಿರುವ ವೆಂಕಟಪ್ಪನವರು ದಲಿತರ ಬದುಕಿನ ನೈಜ ನೆಲೆಯನ್ನು ದಾಖಲಿಸುತ್ತಾರೆ.

"ಕಾದು
ಕೆಂಪಗೆ ನಿಂತೆ ಬಂಟನ ಬಿಸಿಗೆ
ಕರಗದುಂಟೆ ? ಕೊರಗಿದುಂಟೆ?
ಹೊಚ್ಯ ಪೂಸ ಕನಸಿನಾಕಾರ ಸಾರಾರವಾಯ್ತು"೧೭

ಹೀಗೆ ಭಮಾಲಿಕರ ಶೋಷಣೆ, ರಾಜಕಾರಣಗಳ ಶೋಷಣೆ, ಅಧಿಕಾರಿ ಶಾಹಿಯ ಶೋಷಣೆ ಇವುಗಳನ್ನು ಬಹಿರಂಗ ಗೊಳಿಸಿದ 'ಕೆಂಡದ ನಡುವೆ' ಸಂಕಲನ ಒಂದು ಚಾರಿತ್ರಿಕ ದಾಖಲೆಯೇ ಆಗಿದೆ.

'ಸ್ವಾಭಿಮಾನದ ಬೀದಿಗೆ' ಎಂಬ ಇನ್ನೊಂದು ಕವನ ಸಂಕಲವನ್ನು ಮುನಿವೆಂಕಟಪ್ಪನವರು ಹೊರತಂದರು. ಅದರಲ್ಲಿ

"ಬಾರಣ್ಣಾ ಹೋಗೋಣ ಹೊಸನಾಡಿಗೆ
ಸ್ವಾಭಿಮಾನದ ಬೀಡಿಗೆ
ಬಾರಕ್ಕ ಬಾತಂಗಿ ಭೀಮ ಬಯಸಿದ ಜಾಡಿಗೆ
ಸ್ವಾಭಿಮಾನದ ಬೀಡಿಗೆ"

ಎಂದು ಕವಿ ಎಲ್ಲರನ್ನು ಕೂಗಿ ಕರಿಯುತ್ತಾರೆ. ಇಲ್ಲಿ ತಮ್ಮ ಜನಾಂಗಕ್ಕೆ ಸ್ವಾಭಿಮಾನ, ದಿಟ್ಟತೆ, ಧೈರ್ಯ ಕೆಚ್ಚು ಎಲ್ಲವನ್ನು ತುಂಬಲು ಬಯಸುತ್ತಾರೆ.

ದಲಿತ ಕಾವ್ಯಗಳಲ್ಲಿ ಕೆ.ಬಿ. ಸಿದ್ದಯ್ಯನವರ 'ಬಕಾಲ' ಹೆಸರಿಸಲೇ ಬೇಕಾದ ಕವನ ಸಂಕಲನ. 'ಬಕಾಲ' ಋಷಿಯನ್ನು ಸಂಧಿಸಿದ ಕವನದ ನಾಯಕನ ಮನೋವ್ಯಾಪರ, ಒಟನಾಟ, ಸಂವಾದ, ಹಾಗೂ ಧ್ಯಾನ ಧಾರಣೆಗಳೇ 'ಬಕಾಲ' ಕವನದ ಮುಖ್ಯ ಕೇಂದ್ರ, ಇದೊಂದು 'ಖಂಡ ಕಾವ್ಯ'.

೧೭. ಮುನಿವೆಂಕಟಪ್ಪ : ಕೆಂಡದ ನಡುವೆ, ವಿಚಾರವಾದಿ ಪ್ರಕಾಶನ, ಸರಸ್ವತಿಪುರಂ, ಮೈಸೂರು ೨೦೦೦, ಪುಟ - ೧೪

"ಅಕಾಲ ಬಕಾಲ ಮುನಿಯೇ
ನಿನ್ನೆಡತೊಡೆ ಮಾಂಸದಲಿ
ಮಲವೇ ಫಲವು
ಫಲವೇ ವೃಕ್ಷವು
ಹಾಲುಗುಸುಮುಗಳು
ಬಕಾಲ ಮುನಿಯೇ ಬಾ
ಬಯಲು ಕುಸುಮವೆ ತಾ" [೧೮]

ಹೀಗೆ ಬಕಾಲ ಮುನಿಯ ಧ್ಯಾನದೊಂದಿಗೆ ಸಮಾಜದ ನೈಜ ಬುದಕಿನ ಚಿತ್ರಣವನ್ನು ನೀಡುವ ಇಲ್ಲಿಯ ನಾಯಕ ಗ್ರಾಮೀಣ ಬದುಕಿನ ಪ್ರತೀಕವಾಗಿದ್ದಾನೆ.

ದಲಿತ ಕವಿಗಳಲ್ಲಿ ಇರುವರೆಗೆ ಸಂಕಲನಗಳ ರೂಪದಲ್ಲಿ ಕಾವ್ಯವನ್ನು ಪ್ರಕಟಿಸಿದೆ ಇರುವ ಎಂ. ಗೋವಿಂದಯ್ಯನವರ ಕಾವ್ಯವೂ ದಲಿತರ ಬದುಕಿನ ನೋವನ್ನು ಸೆರೆಹಿಡಿಯುತ್ತದೆ. ಅವರ ಕಣ್ಣೀರ ಮಣ್ಣಲ್ಲಿ ಕವನದ ಸಾಲುಗಳು ಹೀಗಿವೆ

"ಕೊತ ಕೊತ ಕುದಿದು ಕರ್ರಗಾದವರು
ಬರಿ ಹೆಸರಿಗೆ ಬಸರಾದವರು ಇವರು
ನನ್ನವರು ಅವರಿವರು ಕಾಲದಲ್ಲಿ ವದ್ದು ವದ್ದು
ಮಾಡಿದಕ್ಕೆ ಹೊಲೆಮಾದಿಗರಾದವರು"

ಇಲ್ಲಿ ದಲಿತರ ಶೋಷಣೆಯ ನೇರ ಚಿತ್ರಣ ಅಭಿವ್ಯಕ್ತವಾಗಿದೆ.

ಹೀಗೆ ದಲಿತ ಕಾವ್ಯ ಜಗತ್ತಿನಲ್ಲಿ ಅನೇಕರು ಕೃಷಿ ಮಾಡಿದ್ದಾರೆ. ಮಾಡುತ್ತಿದ್ದಾರೆ. ಅವರಲ್ಲಿ ಮುಖ್ಯರಾದ ಗಂಗಾರಾಂ ಚಂಡಾಳ, ಸುಬ್ಬು ಹೊಲೆಯಾರ್, ಕೆ. ರಾಮಯ್ಯ, ಮುಡ್ನಕೂಡು ಚಿನ್ನಸ್ವಾಮಿ, ಮುಳ್ಳರು ನಾಗರಾಜ ಮುಖ್ಯರಾಗಿದ್ದಾರೆ.

೧೮. ಕೆ.ಬಿ. ಸಿದ್ದಯ್ಯ : ಬಕಾಲ, ಮನುಪ್ರಕಾಶನ, ಶಿವಮೊಗ್ಗ, ೧೯೯೩, ಪುಟ - ೧೬

## ದಲಿತ ಮಹಾಕಾವ್ಯ : ನೆಲದ ಜೋಗುಳ

'ಮರಣ ಮಂಡಲ ಮಧ್ಯದೊಳಗೆ' ಕಾದಂಬರಿಯ ಮೂಲಕ ಸಾಹಿತ್ಯ ಲೋಕಕ್ಕೆ ಪರಿಚಿತರಾದ ಮುಳ್ಳೂರು ನಾಗರಾಜರು ರಾಮಾಯಣದ ಶಂಬೂಕನ ಪ್ರಸಂಗವನ್ನು ಆಧರಿಸಿ ಈ ಕಾವ್ಯ ರಚಿಸಿದ್ದಾರೆ. ಪ್ರತಿಭಟನೆಯ ಮನೋಧರ್ಮದ ಲೇಖಕರು ಹಿಂದೆಯೇ ಏಕಲವ್ಯ ಶಂಬೂಕರ ಪ್ರಸಂಗಗಳನ್ನು ನೆಮ್ಮಿ ಬರದಿರುವ ಕೃತಿಗಳನ್ನು ಕಾಣುತ್ತಾ ಬಂದಿದ್ದೇವೆ. ಅದರಲ್ಲಿ ಕುವೆಂಪುರವರ 'ಶೂದ್ರ ತಪಸ್ವಿ' ಮತ್ತು 'ಬೆರಳ್‌ಗೆ ಕೊರಳ್', 'ಗೋವಿಂದ ಪೈ' ಅವರ 'ಹೆಬ್ಬೆರಳು', ಸಿದ್ಧಲಿಂಗಯ್ಯನವರ 'ಏಕಲವ್ಯ', ಕೃತಿಗಳು ಮುಖ್ಯವೆನಿಸುತ್ತವೆ. ಅಂತೆ ಇಲ್ಲಿ ಮುಳ್ಳೂರರು 'ಶಂಬೂಕನ' ಮೂಲಕ ಮತ್ತೆ ಪರಂಪರೆಯನ್ನು ಮುರಿದು ಕಟ್ಟುವ ಕೆಲಸಕ್ಕೆ ಕೈಹಾಕಿದ್ದಾರೆ.

"ರಾಜ ರಾಜರ ಕುರಿತು ಹಾಡಲಾರೆ
ದೇವ ಕನ್ನಿಕೆಯರ ಚೆಲುವ ಪಾಡಲಾರೆ"[1]

ಎಂದು ವಾಲ್ಮೀಕಿ ರಾಮಾಯಣವನ್ನು ಪುನರಾವಲೋಕಿಸಲು ಯತ್ನಿಸಿದ್ದಾರೆ. ಅವರೇ 'ಹಳೆಯ ಮಹಾಕಾವ್ಯಗಳ ಎಲ್ಲ ನಿಯಮಗಳನ್ನು ಮುರಿದು ತಂತಾನೆ ಸಂಭವಿಸಿರುವ ಮಹಾಕಾವ್ಯವಿದು' ಎಂದು ಹೇಳಿದ್ದಾರೆ. ನಿಯಮಗಳನ್ನು ಮುರಿದಿರುವ ಮಾತೂ ನಿಜ. ಆದರೆ, ವಚನಕಾರರಿಂದ ಜನಪದ ಸಾಹಿತ್ಯದಿಂದ, ಕವಿತೆಯ ಲಯದ ಜಾಡನ್ನು ಅನುಸರಿಸಿದ್ದಾರೆ ಎಂಬುದೂ ಸತ್ಯ. ಕೆಲವು ಕಡೆ ಸಿದ್ಧಲಿಂಗಯ್ಯನವರ ಕಾವ್ಯದ ಸೊಲ್ಲುಗಳೂ ಕೇಳಿಬರುವುದು.

ಕಾವ್ಯದಲ್ಲಿ ವಾಲ್ಮಿಕಿ ರಾಮಾಯಣವನ್ನು ತಿರಸ್ಕರಿಸುತ್ತಾರೆ.

"ಹುತ್ತಗಳ ಹೆತ್ತಯ್ಯ ನಮ್ಮ ಹುತ್ತಯ್ಯ
ಬರೆದ ರಾಮ ಕಾವ್ಯದ ರೋಮ ರೋಮದಲ್ಲಿ
ಅಸಮಾನತೆ ಹಸಿರಾಗಿದೆ ಸೀತಾದಹನ ಉಸಿರಾಗಿದೆ
ಹೆಂಡಿರ ಕೊಂದವನ ಹೆಸರು ಚಿರವಾಗಿದೆ ನರಲೋಕದಲ್ಲಿ"[2]

ಎಂದು 'ರಾಮಾಯಣ' ಶಂಭೂಕನನ್ನು ಕೊಂದು, ಸೀತೆಯನ್ನು ಕಾಡಿಗೆ ಕಳುಹಿಸಿದ ರಾಮನ ಕಥೆಯಾಗಿದೆ ಅಂತಹ ಕಥೆ ಈ ನಾಡಿನಲ್ಲಿ ಚಿರವಾಗಿದೆ. ಈ ಚಿರವಾಗಿರುವ ಕಾವ್ಯದ ಮಹತ್ವದ ಸುಳ್ಳನ್ನು ನನ್ನ ಕಾವ್ಯದ ಮೂಲಕ ಈ ನಾಡಿನ ಜನರಿಗೆ ತಿಳಿಸುವುದು ನನ್ನ ಉದ್ದೇಶ ಎಂದಿದ್ದಾರೆ.

"ಕೊಲೆಯ ಕೋಗಿಲೆಯ ಕೊರಲಲ್ಲಿ
ವಿಲಯ ಬೆಂಕಿಯ ಕಥೆಯಿದು
ಕೊಂದವರ ಘನತೆ ಸುಳ್ಳೆಂದು
ಸಾರುವ ಕಥೆಯಿದು
ಸಾಂಪ್ರದಾಯಿಕ ಕಾವ್ಯ ವೃಕ್ಷದಲ್ಲಿ
ಬಂಡಾಯದ ಚಿಗುರಿದು

---

೧. ಮುಳ್ಳೂರು ನಾಗರಾಜ : ನೆಲದ ಜೋಗುಳ, ವಿಚಾರವಾದಿ ಪ್ರಕಾಶನ, ಸರಸ್ವತಿಪುರಂ, ೧೯೯೩, ಪುಟ - ೮
೨. ಅದೇ ಪುಟ - ೧೧

ತಲೆ ಕೆಟ್ಟವರಿಗೆ ಇದು ಕಾವ್ಯದ ಹೆಂಡ
ರಾಮ ವ್ಯಕ್ತಿತ್ವಕ್ಕೆ ಇದು ಹೊಸ ಮಾನದಂಡ
ನನಗಾದರೂ ಇದು ಕರುಳ ಹಾಡು
ಈ ಒಡಲ ಕಿಚ್ಚಿನ ಕಾವ್ಯವ ತಂದು
ನೆಲಕ್ಕೆ ಚೆಲ್ಲಿರುವೆ ನಾನಿಲ್ಲಿ ನಿಸ್ಸಂಕೋಚ"[೩]

ಎಂದ ತಮ್ಮ ಕಾವ್ಯದ ಉದ್ದೇಶ ಮತ್ತು ಕಾವ್ಯದ ತಿರುಳು ಏನು? ಎಂಬುದನ್ನು ತಿಳಿಸಿದ್ದಾರೆ.

ಈ ಕಾವ್ಯ ಶಕ್ತಿ ಇರುವುದು ಸಂವೇದನೆಯ ಪ್ರಾಮಾಣಿಕತೆಯಲ್ಲಿ ತೀವ್ರದಿಂದ ತನ್ನ ಸಮಾಜದ ಸಂವೇದನೆಯನ್ನು ಕಣ್ಣಿಗೆ ಕಟ್ಟುವ ಹಾಗೆ ಚಿತ್ರಿಸಿದ್ದಾರೆ. ಸ್ವತಂತ್ರ ಪೂರ್ವ ರಾಜ್ಯಾಡಳಿತದ ಭರತ ಖಂಡದ ದಲಿತರ ಸ್ಥಿತಿಯನ್ನು ಹೀಗೆ ಚಿತ್ರಿಸುತ್ತಾರೆ.

"ಹೆಣವ ಕಾಯಬೇಕು ಮಸಣದಲ್ಲಿರಬೇಕು
ಹಣದ ಬಟ್ಟೆಯ ತೊಡಬೇಕು ಅವರು
ಕೊಳತೆ ಹಣ್ಣುಗಳ ತಿನ್ನಬೇಕು ಅವರು
ಹಾರುವರು ತಿಂದೆಸೆದ ಹಳಸಿದೆಂಜಲ
ತಿನ್ನಬೇಕು ರಾಮರಾಜ್ಯದ ಹೊಲೆಮಾದಿಗರು

ಅವರಿಗಿಲ್ಲ ನೆಲ ಪ್ರತ್ಯೇಕ ಹೊಲ
ಮುಟ್ಟಬಾರದು ಅವರು ಕೆರೆಬಾವಿ ನೀರು
ಅವರಿಗಿಲ್ಲ ಹೊಳೆ ಹಳ್ಳ ಝರಿ ಸ್ವಾತಂತ್ರ್ಯದ ಸಿರಿ
ಹಾರುವರ ಕಾಲ ಕೆಳಗೆ ಬಾಳ ಕಳೆಯಬೇಕಾದ
ಬೀದಿನಾಯಿಗಿಂತ ಕೀಳಾಗಿ ಬಾಳಬೇಕು"[೪]

ಇಂಥ ಹೊಲಗೇರಿಯಲ್ಲಿ ಹುಟ್ಟಿದ 'ಶಂಬೂಕ' ಬ್ರಾಹ್ಮಣತ್ವಕ್ಕೆ ವಿರುದ್ಧವಾಗಿ ಕುಲ ಭೇದಗಳ ವಿರುದ್ಧ ಹೋರಾಡಲು ಪ್ರಯತ್ನಿಸುತ್ತಾನೆ. ಆಗ ಅವನ ತಾಯಿ ನಿನಗೆ ಈ ಕೆಲಸ ಬೇಡ ಮಗು ನಾವು ಹೊಲೆಯರು ರಾಜತ್ವವನ್ನು ಮೇಲ್ವರ್ಗದವರನ್ನು ಎದುರು ಹಾಕಿಕೊಂಡು ಬಾಳುವುದು ಸರಿಯೇ? ಹಾಗಾದರೆ ಅವರು ನಮ್ಮನ್ನು ಬಾಳಲು ಬಿಡುವರೆ ಎಂದು ಹೇಳಿದರೂ ಶಂಬೂಕ

"ಊರ ತೊರೆದರೂ ಸರಿ
ಲೋಕವ ಸರಿಪಡಿಸಬೇಕು
ಹಮ್ಮುತಂಬಿದ ಹಂಬಲಕೆ
ನೆಮ್ಮದಿಯ ನೆಲೆ ನೀಡಬೇಕು
ಕತ್ತಲೆಯ ಕಿತ್ತೆಸೆಯಬೇಕು
ನಮ್ಮೆದೆಗಳಿಂದ"[೫]

೩. ಮುಳ್ಳೂರು ನಾಗರಾಜ: ನೆಲದ ಜೋಗುಳ, ವಿಚಾರವಾದಿ ಪ್ರಕಾಶನ, ಸರಸ್ವತಿಪುರಂ, ೧೯೯೩, ಪುಟ - ೧೧
೪. ಅದೇ ಪುಟ - ೧೩
೫. ಅದೇ ಪುಟ - ೩೬

ಎಂದು ಕಾಡಿಗೆ ಹೋಗಿ ತಪ್ಪಸ್ಸು ಮಾಡುವ ಕಾಯಕಕ್ಕೆ ಕೈಹಾಕುತ್ತಾನೆ. ಹಾರುವ ಋಷಿ ಮುನಿಗಳು ತಪಸ್ಸು ಮಾಡುವ ಸ್ಥಳದಲ್ಲಿ ತಪವ ಗೈಯ್ಯುತ್ತಿರುವ ಸಂದರ್ಭದಲ್ಲಿ ಹಾರುವ ಮುನಿಯ ಕೂಸೊಂದು ಅಸುನೀಗುತ್ತದೆ. ಆ ಕೂಸಿನ ಶವವನ್ನು ರಾಮನ ಅರಮನೆಗೆ ತಂದ ಹಾರುವರು ತಮ್ಮನ್ನು ಕಾಪಾಡಿ, ಹಾರುವ ಕುಲವನ್ನು ಉಳಿಸು ಎಂದು ಬೇಡುತ್ತಾರೆ ಆಗ ರಾಮ

"ಯಾವ ಸಂಕಟ ನಿಮಗೆ ಬಂದಿದೆ?
ನಿಮ್ಮ ನೋವಿಗೆ ಯಾರು ಕಾರಣ?
ಯಾರ ತಲೆಯನು ತರಿಯಲಿ?
ಯಾರ ಒಡಲು ಇರಿಯಲಿ?"[೬]

ಎಂದು ಹಾರುವವನ್ನು ಪ್ರಶ್ನಿಸುತ್ತಾನೆ. ಇಲ್ಲಿ ಕ್ಷತ್ರಿಯ ರೆನಿಸಿಕೊಂಡ ರಾಜರು ಪುರೋಹಿತರ ಸೂತ್ರದ ಬೊಂಬೆಗಳಾಗಿದ್ದರು ಎಂಬುದು, ಆ ಮೂಲಕ ರಾಜನ ನ್ಯಾಯ ಕಾನೂನು ನೀತಿ ನಿಯಮಗಳನ್ನು ತಾವೇ ರೂಪಿಸಿ ತಮ್ಮ ವರ್ಗಕ್ಕೆ ಅನುಕೂಲವಾಗುವಾಂತೆ ಹಾಗೂ ಇತರೆ ಕೆಳವರ್ಗಗಳೂ ತಾವು ಹೇಳಿದಂತೆ ಕೇಳಲು ಕಾನೂನು ರೂಪಿಸುತ್ತಿದ್ದರು ಎಂಬುದು ವೇದ್ಯವಾಗುತ್ತದೆ. ಇದು ಅಕ್ಷರ ಸಹ ನಿಜ.

ಜಾತಿಯಲಿ ಕೀಳಾದ ಹೊಲೆಯ ತಪೋನಿರತನಾಗಿರವುದರಿಂದ ಲೋಕದ ಹಾರುವ ಕುಲಕ್ಕೆ ಕುಂದು ಬಂದಿದೆ ಸಂಕಟ ಬಂದಿದೆ ಎಂದು ಹಾರುವರ ಮಾತನ್ನು ಕೇಳಿದ ರಾಮ, ಶಂಬೂಕನೆಂಬ ಕೀಳು ಹೈದನ ತಲೆ ಕಡಿದು ನಿಮ್ಮನ್ನು ರಕ್ಷಿಸುವೆ ಎಂದು ಹೇಳುತ್ತಾನೆ. ಈ ನಿರ್ಧಾರ ಕೈಗೊಂಡ ರಾಮನಿಗೆ 'ಜಾಬಾಲ' ಮುನಿವರ್‍ಯರು ಬುದ್ಧಿ ಹೇಳುತ್ತಾನೆ. ಪ್ರಜೆಗಳನ್ನಾಳುವ ಪ್ರಜಾನಾಯಕ ರಾಜನಾದ ರಾಮ ನೀನೇ ನಿನ್ನ ರಾಜ್ಯದ ಪ್ರಜೆಯೊಬ್ಬನನ್ನು ಕೊಲ್ಲುವುದು ಸರಿಯೆ? ನಿನಗಿದು ತರವೆ? ಎಂದು ಹೇಳುತ್ತಾರೆ. ಆದರೆ ರಾಮ "ನನ್ನ ಪ್ರಾಣವು ಮುನಿಗಳೆ, ನನಗಾಗಿ ನಾನು ಕೊಲ್ಲಲಾರೆ, ನಿಮಗಾಗಿ ನಾನು ಕೊಲ್ಲಬೇಕು" ಎಂದು ಮುಂದಾದ ರಾಮನಿಗೆ ಆತನ ಜನನವನ್ನು ಕುರಿತು ಜಾಬಾಲರು;

"ದಶರಥನ ಪುತ್ರಕಾಮೇಷ್ಟಿಯಲ್ಲಿ
ಅನಾರ್ಯ ಮುನಿಗಳ ವೀರ್‍ಯಕ್ಕೆ ಜನಿಸಿದವನೀನು
ಕೀಳೆಂಬ ಕಳವಳವು ಬೇಡಯ್ಯ
ಮೇಲೆಂಬ ಹುಂಬತನವೂ ಬೇಡಯ್ಯ"

ಎಂದು ಬುದ್ಧಿ ಹೇಳಿದರೂ ರಾಮ ಕೇಳುವುದಿಲ್ಲ. ಜಾಬಾಲಿಯವರನ್ನು ನಾಸ್ತಿಕ ಗುರು ಎಂದು ಜರಿದು ಶಂಬೂಕನ ತಲೆದಂಡಕ್ಕೆ ಮುಂದಾಗಿ ಶಂಬೂಕನ ಹತ್ತಿರ ಬರುತ್ತಾನೆ. ಇಲ್ಲಿ ರಾಮನಿಗೂ ಶಂಬೂಕನಿಗೂ ನಡೆಯುವ ಸಂಭಾಷಣೆ ಬಹಳ ಅರ್ಥವತ್ತಾಗಿದ್ದು ಮೇಲ್ವರ್ಗದ ಪ್ರತಿನಿಧಿಯಾದ ರಾಮನಿಗೆ ದಲಿತ ವರ್ಗದ ನಾಯಕ ಶಂಬೂಕ ರಾಮನ ಕ್ರಿಯೆಗೆ ಪ್ರತಿಭಟನೆಯ ಮಾತುಗಳ ಮೂಲಕ ಪ್ರತಿಕ್ರಿಯಿಸುತ್ತಾನೆ.

ರಾಮನು ಶಂಬೂಕನನ್ನು ಕುರಿತು ಕೊಲ್ಲುವೆನು ನಿನ್ನನ್ನು, ಗೆಲ್ಲುವೆನು ಆರ್ಯಲೋಕದ ಮನಸ್ಸನ್ನು ಎಂದು

೬. ಮುಳ್ಳೂರು ನಾಗರಾಜ : ನೆಲದ ಜೋಗುಳ, ವಿಚಾರವಾಧಿ ಪ್ರಕಾಶನ, ಸರಸ್ವತಿಪುರಂ, ೧೯೯೩, ಪುಟ -೧೫೦

"ತಲೆದಂಡ ತಲೆದಂಡ ನಿನಗೀಗ
ನಿನ್ನ ತಪವೇ ನಿನ್ನ ಕೊಲೆಗೆ ಕಾರಣ
ಹುಚ್ಚು ತಪಸಿನ ಬೆಂಕಿಯಲ್ಲಿ
ನೀನುರಿದು ಹೋಗುವೆ
ಕುಲದ ನಿಯಮಗಳ ಮುರಿದ
ಕಾರಣ ನಾ ನಿನ್ನ ಕೊಲ್ಲುವೆ"[೭]

ಎಂದು ಉದ್ಧರಿಸಿದ ರಾಮನಿಗೆ ಶಂಬೂಕ ನೀಡುವ ಉತ್ತರ;

"ಅಂಧಕಾರದ ಅಂತರಗಂದಲ್ಲಿ ಬೆಳಕಿದೆ
ಸಾವಿನ ಸೆರಗಿನಲ್ಲಿ ಸಂಗೀತವಿದೆ
ಅಸಮಾನತೆಯ ಗರ್ಭದಲ್ಲಿ
ಸಮಾನತೆಯ ಆಶಯಗಳಿವೆ
ಗುಲಾಮಗಿರಿಯ ಬೇರುಗಳಲ್ಲಿ
ಬಂಡಾಯದ ಬೆಂಕಿಯಿದೆ
ರಾಜೂಜರ ಹೃದಯದಲ್ಲಿ
ನಿರ್ಲಜ್ಜ ರಕ್ತದಾಹವಿದೆ
ರಾಮನೊಳಗೆ ರಾಕ್ಷಸನಿದ್ದಾನೆ
ಮಾನವತೆಯ ಸೂರ್ಯನು
ಮರೆಯಾಗಿದ್ದನೆ ಅಯ್ಯಾಧ್ಯೆಯಲ್ಲಿ"[೮]

ಎಂದು ಉತ್ತರಿಸುವಲ್ಲಿ ಪ್ರತಿಭಟನೆಯ ಸ್ವರೂಪ ವ್ಯಕ್ತವಾಗಿದೆ. ಶತ ಶತಮಾನಗಳಿಂದ ಪಂಚಮರನ್ನು ಶೋಷಣೆ ಮಾಡುತ್ತ ಬಂದಿರುವ ಆಳುವ ವರ್ಗದ ವಿರುದ್ಧ ಇಡೀ ದಲಿತ ಸಮುದಾಯದ ಪ್ರತಿರೋಧವನ್ನು ಕವಿ ಶಂಬೂಕನ ಮೂಲ ಅಭಿವ್ಯಕ್ತಿಸಿದ್ದಾರೆ. 'ರಾಮರಾಜ್ಯ ಸುಖೀ ರಾಜ್ಯ' ಎಂಬ ಕಲ್ಪನೆ ಕೇವಲ ಭ್ರಮೆ ಮಾತ್ರ, ಅಲ್ಲಿ ದೀನ ದಲಿತರಿಗೆ ಬದುಕಲು ಆಗದ ದಯಾನಿಯ ಸ್ಥಿತಿ ಇತ್ತು, ಅದರ ವಿರುದ್ಧ ಪ್ರತಿಭಟನೆ ಮಾಡಿದವರಿಗೆ ಮರಣದಂಡನೆಯ ಶಿಕ್ಷೆಯಾಗುತ್ತಿತ್ತು, ಎನ್ನುವುದು ಕವಿಯ ವೇದನೆಯಾಗಿದೆ.

ಕಲಹೀನ ಕೆಲಸ ಮಾಡಿದ ಎಂದು ಅಪವಾದ ಹೊತ್ತ ಶಂಬೂಕನನ್ನು ಕೊಲ್ಲಲು ಮುಂದಾದ ರಾಮನನ್ನು ಆತ ಶಪಿಸುವುದು ಹೀಗೆ

"ನನ್ನ ರಕ್ತದ ಚಿಲಮೆಯಲಿ ಮಳುಗೇಳಲಿ
ನಿನ್ನ ಸುಂದರ ಅಯ್ಯೋಧ್ಯಾ
ಹೊಲೆತನದ ಶಾಪದಲಿ ನಿನ್ನ ಕುಲಗಳು ತೋಯಲಿ
ನಿನ್ನ ಪಾಪಗಳು ಪುನೀತವಾಗಲಿ ನನ್ನ ರಕ್ತದಿಂದ

---

೭. ಮುಳ್ಳೂರು ನಾಗರಾಜ : ನೆಲದ ಜೋಗುಳ, ವಿಚಾರವಾದಿ ಪ್ರಕಾಶನ, ಸರಸ್ವತಿಪುರಂ, ೧೯೯೩, ಪುಟ - ೧೬೧
೮. ಅದೇ ಪುಟ - ೧೬೩

ಒಂದು ತಲೆಯನ್ನು ತರಿದರೆ ಒಂಬತ್ತು ತಲೆ ಮಾರುಗಳು
ಉರಿದು ಹೋಗಲಿ ನಿನ್ನ ರಾಜ್ಯದಲ್ಲಿ
ಅಂಜುವುದಿಲ್ಲ ಸಾವಿಗೆ"..............

ಎಂದು ಪ್ರತಿಭಟಿಸುತ್ತಾನೆ. ಕೊನೆಗೆ ರಾಮನಿಂದ ಕೊಲ್ಲಲ್ಪಟ್ಟ ಶಂಬೂಕ 'ಪ್ರತಿಭಟನಾ ಸಂಗೀತ'ವಾಗುತ್ತಾನೆ. ಹೀಗೆ ಕವಿಯು ಗತಕಾಲದ ಚರಿತ್ರೆಗೆ ಪ್ರತಿಕ್ರಿಯಿಸುವ ಹಂತದಲ್ಲಿಯೇ ನಿಲ್ಲದೆ ಚರಿತ್ರೆ, ವರ್ತಮಾನಗಳನ್ನು ಬೆಸೆದು ಕಟ್ಟಿದ ಸೇತುವೆಯ ಮೇಲೆ ಕವಿ ಭವಿಷ್ಯದ ಕನಸಿನ ಸಮಾಜವೊಂದರ ಹಂಬಲಗಳಿಗೆ ಸಮುದಾಯವನ್ನು ಕೊಂಡುಯ್ಯ ಬಯಸಿದ್ದಾನೆ. ಆ ಸಮಾಜದ ಚಿತ್ರಣ ಹೀಗಿದೆ.

"ಗೋಡ್ಸೆಯೂ ಗಾಂಧೀಯೂ ಕೂತು ಮಾತನಾಡುತ್ತಾ
ಟೀ ಕುಡಿಯುತ್ತಿಹರು ಒಟ್ಟಿಗೆ
ಸಾಂಪ್ರದಾಯಿಕ ಊಹೆಗಳೆಲ್ಲಾ ಇಲ್ಲಿ ತಲೆಕೆಳಗು!"

ಹಾಗೂ ಸಮಾಜದಲ್ಲಿ ಕುದಿಯುವ ಕುಲುಮೆಗಳು ಮಧುರನಾದದ ತಂಬೂರಿಗಳಾಗುತ್ತವೆ. ಸಂತರ ಮಾತುಗಳು ಸಂತೆಯ ಚುರಗಳು ಅಲ್ಲಿವೆ. ಅಲ್ಲಿ ರಾಮನಿಗೆ ಸಿಂಹಾಸನವಿಲ್ಲ. ಶಂಬೂಕನಿಗೆ ಹೊಲಗೇರಿಯಿಲ್ಲ. ಈ ಉಟೋಪಿಯಾದ ವರ್ಣನೆಯ ಈ ಕಾವ್ಯದ ಉಜ್ವಲ ಭಾಗವಾಗಿದೆ. ಕೆಲವೊಮ್ಮೆ ಕತೆಯ ಹಂದರವಿಲ್ಲದೆ ಕಾವ್ಯದ ಬಳ್ಳಿ ಹಬ್ಬಲು ಹೋಗಿ ಒಮ್ಮೊಮ್ಮೆ ಕುಸಿಯುವುದೂ ಉಂಟು.

ಒಟ್ಟಾರೆಯಾಗಿ 'ನೆಲದ ಜೋಗುಳ'ದ ಇತಿಮಿತಿಗಳನ್ನು ಪರಿಶೀಲಿಸುವುದೇ ಆದರೆ ಇದು ಒಂದು ಮಹಾಕಾವ್ಯ ಎಂದು ಅವರ ಕರೆದಿದ್ದಾರೆ. ಆದರೆ ಇಲ್ಲಿ ಪರಂಪರೆಯ ಮಹಾಕಾವ್ಯಕ್ಕೆ ಇರಬೇಕಾದ ಲಕ್ಷಣಗಳಿಲ್ಲ. ಕಾರಣ ಅವರೇ 'ಹಳೆಯ ಮಹಾಕಾವ್ಯಗಳ ಎಲ್ಲಾ ನಿಯಮಗಳನ್ನು ಮುರಿದು ತಂತಾನೆ ಸಂಭವಿಸಿರುವ ಮಹಾಕಾವ್ಯವಿದು' ಎಂದು ಹೇಳಿರುವುದರಿಂದ ಅದರ ಗೋಜಿಗೆ ಹೋಗುವ ಹಾಗಿಲ್ಲ. ಅದು ಒಂದು ದಲಿತ ಸಂವೇದನೆಯ ಕವಿತೆಗಳ ಪುಂಜವಾಗಿದ್ದು ಸರಳ ಭಾಷೆ ಮತ್ತು ಜನಪದಿಯಾಲಯದೊಡನೆ ರಚಿಸಲ್ಪಟ್ಟಿರವುದರಿಂದ ಯಾರಿಗೂ ಅರ್ಥವಾಗದೆ ಇರದು. ಗೋಕಾಕರ ಮಹಾಕಾವ್ಯವನ್ನು ಒಳಗೊಂಡಂತೆ ಆಧುನಿಕ ಕನ್ನಡದ ಎಷ್ಟೋ ಮಹಾಕಾವ್ಯಗಳು 'ಮಹಾ ಹೌದು' ಆದರೆ 'ಕಾವ್ಯ'ಗಳಿಲ್ಲ. ಆದರೆ 'ನೆಲಜ ಜೋಗುಳ'ದಲ್ಲಿ ಕಾವ್ಯ ಪ್ರತಿಭೆಯಿದೆ. 'ನನ್ನ ನೋವಿನ ಜೊತೆ ಲಕ್ಷೋಪ ಲಕ್ಷ ಸಂವತ್ಸರಗಳು ಮಾತನಾಡಿವೆ' ಎನ್ನುತ್ತ ಶಂಬೂಕನ ನೆನಪಿನಲ್ಲಿ ಸಮಕಾಲೀನ ದಲಿತ ಬದುಕನ್ನು ತನ್ನ ತಲ್ಲಣಗಳನ್ನು ಕಥನವಾಗಿ ಮಂಡಿಸುವುದು ಇಲ್ಲಿನ ಉದ್ದೇಶವಾಗಿದೆ". ಈ ಕಾವ್ಯಕ್ಕೆ ಮೂರು ಪ್ರೇರಣೆಗಳ ಒತ್ತಡವಿದೆ. ಒಂದು: ಸಮಾಜ ಪರಿವರ್ತನೆಯ ಈ ತಿರುಗಣೆಯ ಹೊತ್ತಲ್ಲಿ ದಲಿತರ ಮೇಲಾಗುತ್ತಿರುವ ಹಲ್ಲೆಗಳು. ಎರಡು: ರಾಮನನ್ನು 'ಪುರೋಷೋತ್ತಮನ' ಆದರ್ಶ ಮಾದರಿಯ ನೆಪದೊಳಗೆ ಏಕರೂಪಿಯಾದ ದಲಿತ ವಿರೋಧಿಯಾದ ಸಾಂಸ್ಕೃತಿಕ ರಾಜಕಾರಣವು ಚಿಗಿತಗೊಳ್ಳುತ್ತಿರುವುದು. ಮೂರು: ದಲಿತರ ಹಿತಕಾಯಲೆಂದೇ ಹುಟ್ಟಿರುವ ಸಂಘಟನೆಗಳು ಜಡಗೊಳ್ಳುತ್ತಿರುವುದು. ಹೀಗಾಗಿಯೇ ಪುರಾಣದ ಪುನರ್‌ರಚನೆಯ ಕಾಯಕದಲ್ಲಿ ತೊಡಗಿದ ಈ ಕವಿಗೆ ಗತವನ್ನು ಅರ್ಥಮಾಡಿಕೊಳ್ಳುತ್ತಲೇ ಅದನ್ನು ವರ್ತಮಾನಕ್ಕೆ ತಂದು ಜೋಡಿಸಿಕೊಳ್ಳುವ ಸಾಂಸ್ಕೃತಿಕ ಜರೂರತೆ ತಾನಾಗಿಯೇ ಒತ್ತರಿಸಿ ಬಿಟ್ಟಿದೆ"[೯].

೯. ಅರವಿಂದ ಮಾಲಗತ್ತಿ : ದಲಿತ ಮಾರ್ಗ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨, ಪುಟ - ೩೬೭.

'ನೆಲಜ ಜೋಗುಳ'ದ ಕಥೆಯು ಹಂದರ ಹಿರಿದಾಗಿದ್ದು ಅದನ್ನು ಮತ್ತೂ ಹಿರಿದಾಗಿ ಎಳೆಯಲು ಹೋದ ಕವಿಗೆ ಅಂತಹ ಕಡೆ ಶಕ್ತಿಯುತವಾದ ಪದ್ಯಗಳು ಬಾರದೆ ಬಡಿ ಬಡಿಯಾದ ಕವಿತೆಗಳನ್ನು ಹೋಲುವ ಅನುಭವವಾಗುತ್ತದೆ. ಕೆಲವೊಮ್ಮೆ ಒಂದು ಪದ್ಯ ಭಾಗದ ಅರ್ಥದ ಪುನರಾವರ್ತನೆ ಮತ್ತೊಂದು ಭಾಗದಲ್ಲಿ ಕಾಣಿಸುವುದುಂಟು. ಆದರೂ ಕವಿಯ ವೇದನೆಗೆ ಇದು ಅನಿವಾರ್ಯವಾಗಿದೆಯೇನೋ ಎನಿಸುತ್ತದೆ. ಪದ್ಯದ ಮಧ್ಯ ಭಾಗಗಳಲ್ಲಿ ಬರವ ಕೆಲವು ಪ್ರತಿಭಟನೆಯ ಸ್ವರೂಪದ ವಾಕ್ಯಗಳು ಕಾವ್ಯಾರ್ಥ ನೀಡದೆ, ಮೇಲ್ವರ್ಗದ ನಿಂದನೆಗಾಗಿಯೇ ಬಳಸಿದ ಘೋಷಣೆಗಳು ಅಥವಾ ಹೇಳಿಕೆಗಳಾಗಿವೆ ಎನಿಸುತ್ತದೆ. ಈ ಸಂದರ್ಭದಲ್ಲಿ ಕವಿ ಭಾವಾವೇಶಕ್ಕೆ ಒಳಗಾಗಿ ಹೇಳಿರುವುದೇ ಹೆಚ್ಚು. ಇದು ಕವಿಗಿರುವ ತನ್ನ ಸಮಾಜಪರ ಕಾಳಜಿಯನ್ನು ತಿಳಿಸುತ್ತದೆ.

ಶೂದ್ರ ತಪಸ್ವಿಯಲ್ಲಿ ಶಂಬೂಕನ ವಿವೇಕನಿಂದ ರಾಮನು ಪರಿವರ್ತನೆ ಗೊಳ್ಳುತ್ತಾನೆ. ಆದರೆ ಇಲ್ಲಿ ಜಾಬಾಲಿ, ಶಂಬೂಕರ ವಿವೇಕಗಳಿಗೆ ಮಣಿಯಾದ ರಾಮ ಕೊಲೆಗೈದೇ ತೀರುತ್ತಾನೆ. ಇಲ್ಲಿ ಮೂಲ ರಾಮಾಯಣದ ವಸ್ತುವನ್ನು ಉಳಿಸಿಕೊಳ್ಳಲಾಗಿದೆ. 'ನೆಲಜ ಜೋಗಳ' ದಲಿತ ಸಾಹಿತ್ಯರಲ್ಲಿ ಮೂಡಿಬಂದ ಮೊದಲ ಮಹಾ ಕಾವ್ಯವಾದರೂ ಸಿದ್ದಲಿಂಗಯ್ಯ ಅವರ ಕಾವ್ಯಗಳು, ದೇವನೂರ ಮಹಾದೇವ ಅವರ ಕಾದಂಬರಿಗಳು ಪ್ರಸಿದ್ಧಿಯಾದುದರ ಮಟ್ಟಿಗೆ ಇದು ಪ್ರಚಾರ ಪ್ರಸಿದ್ಧಿ ಪಡೆಯಲಿಲ್ಲ. ಇದಕ್ಕೆ ಕಾರಣ. ಹುಡುಕುವುದು ಕಷ್ಯ ಸಾಧ್ಯ ಆದರೂ ಕಾವ್ಯದಲ್ಲಿನ ದಲಿತ ಸಂವೇದನೆ ವಸ್ತುನಿಷ್ಠವಾಗಿ ಒಡಮಾಡಿದೆ.

## ದಲಿತ ಕಥೆಗಳು

ದಲಿತ ಸಾಹಿತ್ಯ ಘಟ್ಟದಲ್ಲಿ ಸಣ್ಣ ಕಥೆಗಳು ಬಂದದ್ದು ಬೆರಳೆಣಿಕೆಯಷ್ಟು ಮಾತ್ರ, ಅನೇಕ ದಲಿತ ಸಾಹಿತಿಗಳಲ್ಲಿ ದೇವನೂರು ಮಹಾದೇವ ಅವರು ಮಾತ್ರ ಪ್ರಸಿದ್ಧ ದಲಿತ ಕಥೆಗಾರರಾಗಿ ಕಂಡುಬಂದರು. ಅವರ 'ದ್ಯಾವನೂರು' ಅತ್ಯುತ್ತಮ ಕಥಾ ಸಂಕಲನವಾಗಿ ಮೂಡಿಬಂದಿದೆ. ನಾನು ಈ ಭಾಗದಲ್ಲಿ ದೇವನೂರು ಅವರ ಕಥೆಗಳನ್ನು ಮಾತ್ರ ವಿಶ್ಲೇಷಣೆ ಮಾಡುತ್ತೇನೆ.

'ದ್ಯಾವನೂರು' ಕಥಾ ಸಂಕಲನ 'ಏಳು' ಕಥೆಗಳನ್ನು ಒಳಗೊಂಡಿದೆ. ಅವುಗಳೆಂದರೆ ಮಾರಿಕೊಂಡವರು, ಗ್ರಸ್ತರು, ಒಂದು ದಹನದ ಕಥೆ, ದತ್ತ, ಡಾಂಬರು ಬಂದುದು. ಮೂಡಲ ಸೀಮೆ ಕೊಲೆ ಗಿಲೆ ಮುಂತಾಗಿ, ಮತ್ತು ಅಮಾಸ. ಈ ಎಲ್ಲಾ ಕಥೆಗಳು ದೇವನೂರಿನ ಸುತ್ತ ಮುತ್ತ ನಡೆದ ನೈಜ ಘಟನೆಗಳೇ ಆಗಿವೆ. ಇವು ಒಂದು ರೀತಿಯಲ್ಲಿ ದೇವನೂರು ಮಹದೇವ ಅವರ ಆತ್ಮ ಕಥೆಗಳಂತಿವೆ. 'ಮಾರಿಕೊಂಡವರು' ಕಥೆಯು ಒಂದು ದಲಿತ ಕುಟುಂಬದ ದಯಾನೀಯ ಸ್ಥಿತಿಯನ್ನು ಚಿತ್ರಿಸುತ್ತದೆ. ಇಲ್ಲಿ ಪ್ರಮುಖ ಪಾತ್ರಗಳಾದ ದಲಿತರ ಬೀರ ಮತ್ತು ಲಕ್ಕಿ, ಇಡೀ ದಲಿತವರ್ಗದ ಪ್ರತಿನಿಧಿಗಳು ಹಾಗೂ ಕಿಟ್ಟಪ್ಪ ಮೇಲ್ವರ್ಗದ ಪ್ರತಿನಿಧಿಯಾಗಿ ಕಂಡು ಬರುತ್ತಾನೆ. ದಿಕ್ಕು ದೆಶೆಯಿಲ್ಲದೆ ರೈಲಿನಲ್ಲಿ ಪ್ರಯಾಣಿಸುತ್ತಿದ್ದ ಬೀರ ಮತ್ತು ಲಕ್ಕಿಯರನ್ನು ಕರೆತಂದ ಗೌಡ ಆಶ್ರಯ ನೀಡುತ್ತಾನೆ. ಗೌಡನ ಮಗ ಕಿಟ್ಟಪ್ಪ ಓದಿದ ಯುವಕ. ಬೀರನ ಗುಡಿಸಲಿಗೆ ದಿನಾ ಬರುವ ಆತ ಒಂದು ದಿನ ಬೀರನಿಗೆ ಚೆನ್ನಾಗಿ ಕುಡಿಸಿ ಗುಡಿಸಲಲ್ಲೆ ತಾನೂ ಮಲಗಿ ಲಕ್ಕಿಯ ಜೊತೆ ಅಕ್ರಮ ಸಂಪರ್ಕ ಸಾಧಿಸುತ್ತಾನೆ. ಆಗ ಲಕ್ಕಿ ನಿರಾಕರಿಸಲು ಆಗದ ಸ್ಥಿತಿಯಲ್ಲಿರುತ್ತಾಳೆ. ಕಿಟ್ಟಪ್ಪ ಮತ್ತು ತನ್ನ ಹೆಂಡತಿ ಲಕ್ಕಿಯ ನಡುವೆ ಅಕ್ರಮ ಸಂಬಂಧವಿದೆ ಎಂದು ತಿಳಿದರೂ ಬೀರ ಸುಮ್ಮನಾಗುತ್ತಾನೆ. ಪರಿಸ್ಥಿತಿಗೆ ಒಗ್ಗಿ ಕೊಳ್ಳುತ್ತಾನೆ. ಏಕೆಂದರೆ ಹೆಚ್ಚಿಗೆ ಮಾತಾಡೊಕೆ ಅನ್ನ ಹಾಕಿದ ದಣಿ ಬೇರೆ ಎಂಬ ಕೃತಜ್ಞತಾ ಮನೋಬಾವ ಅಡ್ಡಿ ಬರುತ್ತದೆ. ಆದರೆ ಕುಡಿದ ನಿಶೆಯಲ್ಲಿ ತನ್ನ ಪ್ರತಿಭಟನೆ ವ್ಯಕ್ತಪಡಿಸುತ್ತಾನೆ. ಲಕ್ಕಿಯನ್ನು ಕರೆದ ಬೀರ, ಅವಳು ಮಾತನಾಡದಿದ್ದಾಗ

"ನೀ ಮಾತಾಡದಿಲ್ವ ? ನನ್ನೊಂದ್ಗ ಯಾಕೆ ಮಾತಾಡ್ತಿಹೇಳು - ಕಿಟ್ಟಪ್ಪನೊಂದಿಗೆ ಮಾತಾಡುದು ಬಿಟ್ಟು, ಎಷ್ಟಾದ್ರು ಅವ ನಿನ್ನ ಮಿಂಡ್ಗಾರ ಅಲ್ವಾ ?" ಕೊತ್ತಿ ಕಣ್ಮುಚ್ಕಂಡು ಹಾಲು ಕುಡಿದ್ರ ಗೊತ್ತಾಗಲ್ವಂತೆ! ಹೆಹೆಹ್ಹೆ ಗತಿ ಕಾಣೆಸ್ತೀನಿ ಕಂದಾ .......... ಬೆಳ್ಗಾಗಲಿ, ಮಚ್ಚುಮಡಗಿವನಿ ತೊಲೆಮ್ಯಾಗ .............ರಡಿಯಾಗದೆ ನೀನೂ ಇಲ್ಲ, ಅವನೂ ಇಲ್ಲ. ಬಾವ್ಗ ತರದ್ ತರದ್ ಹಾಕ್ತೀನಿ, ನನ್ನನ್ನ ಅಷ್ಟಕ್ಕು ತಪರ ಅಂತ ತಿಳ್ಕೊಂಡಿವಿರಿ ಈಗ ಏನಾಯ್ತು ತಕ್ಕೊ ............ ಬೆಳಗಾಗೋದೇ ಇಲ್ವಾ? ನಾಳೆ ಅವ್ನು ಬರೋದೇ ಇರಲ್ಲಾ ಬಂದೆ ಬರ್‍ತಾನೆ ಮಿಂಡಗಾತಿ ಮೊಕ ನೋಡಕೆ"[೧] ಎನ್ನುವಲ್ಲಿ ಆತನ ಪ್ರತಿಭಟನೆಯು ಜೊತೆಗೆ ಇಡಿ ದಲಿತ ವರ್ಗವನ್ನು ನಾನಾ ರೂಪದಲ್ಲಿ ಶೋಷಣೆ ಮಾಡುತ್ತಿರುವ ಮೆಲ್ವರ್ಗದ ವಿರುದ್ಧದ ಸೌಮ್ಯವಾದ ಪ್ರತಿಭಟನೆ ವ್ಯಕ್ತವಾಗಿದೆ.

ಈ 'ಮಾರಿಕೊಂಡವರು' ಕಥೆಯ ಶೀರ್ಷಿಕೆ ಹೇಳುವಂತೆ ಕೆಳವರ್ಗದವರು ಮೇಲ್ವರ್ಗದವರ ಹಿತಾಶಕ್ತಿಗೆ ಎಲ್ಲವನ್ನೂ ಮಾರಿಕೊಂಡಿದ್ದಾರೆ ಅಥವಾ ಮಾರಿಕೊಳ್ಳುವಂತೆ ಮೇಲ್ವರ್ಗದವರೆ ಮಾಡಿದ್ದಾರೆಯೆ? ಎಂಬುದು

೧. ದೇವನೂರು ಮಹಾದೇವ : ಒಡಲಾಳ, ಸುವ್ವಾಲೆ ಪ್ರಕಾಶನ, ಕುವೆಂಪುನಗರ, ಮೈಸೂರು ೧೯೯೫, ಪುಟ - ೦೫.

ಕಥೆ ಓದಿನಿಂದ ಸ್ಪಷ್ಟವಾಗುತ್ತದೆ. ಇಲ್ಲಿ ಕೆಳವರ್ಗದ ಜನರ ಬದುಕು ಮೇಲ್ವರ್ಗದ ಜನರ ಉಪಟಳದಿಂದ ನಿಯಂತ್ರಿತವಾಗುತ್ತದೆ ಆದ್ದರಿಂದ ದಲಿತರು ಅವರ ದಣಿಗಳಿಗೆ ಏನೂಕೇಳಿದರೂ ಕೊಡಬೇಕಾದ ಪರಿಸ್ಥಿತಿಯಲ್ಲಿ ತಮ್ಮ ತನವನ್ನು ಕಳೆದು ಕೊಂಡಿದ್ದಾರೆ ಎಂಬುದು ಈ ಕಥೆಯ ಅಂತರಾಳ.

ದ್ಯಾವನೂರನ ಕಥಾ ಸಂಕಲನದ ಎರಡನೇಯ ಕಥೆ 'ಗ್ರಸ್ತರು'. ಇಲ್ಲಿ ತಾನು ಮಾಡಿದ ಉಪಕಾರವನ್ನೇ ನೆನೆಸಿಕೊಂಡು ತನಗೆ ದೀನನಾಗಿ ನಡೆಯುತ್ತಿರಲಿ ಎಂದು ಗೌಡ ಭಾವಿಸುತ್ತಾನೆ. ಆದರೆ ಉಪಕಾರ ಪಡೆದು ಕೊಂಡ ವ್ಯಕ್ತಿ ಅದನ್ನು ದಿಕ್ಕರಿಸುತ್ತಾನೆ. ಇಲ್ಲಿ ಓದಿದ ಹುಡುಗನೊಬ್ಬನಿಗೆ ಮಠದಸ್ವಾಮಿಗಳ ಬಳಿ ಕೆಲಸ ಕೊಡಿಸಿದ ಗೌಡ ನನ್ನಿಂದಲೇ ನಿನಗೆ ಕೆಲಸ ಸಿಕ್ಕಿದ್ದು ಎಂದು ದರ್ಪ ತೋರಿಸುತ್ತಾನೆ. ಆದರೆ ಮಠ-ಸ್ವಾಮಿ -ಧರ್ಮದ ಬಗ್ಗೆ ತಿರಸ್ಕಾರದಿಂದ ಓದಿದ ಹುಡುಗ ಕೆಲಸ ಬಿಟ್ಟು ಗೌಡರ ಸಾಲ ತೀರಿಸಲಾಗದ ಸ್ಥಿತಿಯಲ್ಲಿದ್ದವನಿಗೆ ತಾಯಿ, ಗೌಡರು ದೇವರ ಸಮಾ ಎಂದು ಅವರ ಬಳಿ ಹೋಗಿ ಬಾ ಎಂದಾಗ, ಮಗ ಒಲ್ಲದ ಮನಸ್ಸಿನಿಂದ ಹೋಗಿ ಗೌಡರ ದಾಕ್ಷಿಣ್ಯಕ್ಕೆ ಒಳಗಾಗದೆ ಹಿಂದಿರುಗುತ್ತಾನೆ. ಆಗ ತಾಯಿ ಮಗನನ್ನು ಕುರಿತು" ಈಗ್ಲೆ ಹೋಗಿ ತಪ್ಪಾಯ್ತು ಅಂತ ಕೇಳ್ಕೊ. ದೇವ್ರಂಥವರತ್ರ ನಿಂದು ನಿಷ್ಟೂರ"[೧] ಎಂದು ಹೇಳಿದಾಗ ಮಗ ನಿರಾಕರಿಸುತ್ತಾನೆ. ಇಲ್ಲಿ ತಾಯಿ ಮತ್ತು ಮಗನ ನಡುವೆ ಒಂದು ಅಂತವಿದೆ ನಾಗರೀಕತೆಯಿಂದ ಸಾಮಾಜಿಕವಾಗಿ ಮುಂದುವರೆದ ವ್ಯಕ್ತಿ ತನ್ನ ಮನೆಯ ಹೆಂಚು ಸರಿಪಡಿಸಲು ಕಾಸಿಲ್ಲದಿದ್ದರೂ ಸ್ವಾಭಿನಮಾನ ಬಿಡುವುದಿಲ್ಲ. ಈ ಕಥೆಯಲ್ಲಿ ಯಾರ ಬದುಕನ್ನು ಯಾರೂ ನಿಯಂತ್ರಿಸಬಾರದು ಎಲ್ಲರಿಗೂ ಅವರದೇ ಆದ ಸ್ವಾಭಿಮಾನವಿರುತ್ತದೆ ಎಂಬುದು ವ್ಯಕ್ತವಾಗಿದೆ.

'ಒಂದು ದಹನದ ಕಥೆ'ಯು ಕೆಳವರ್ಗದ ಗ್ರಾಮೀಣ ಜನರಲ್ಲಿ ಮನೆಮಾಡಿರುವ ಗೊಡ್ಡು ಸಂಪ್ರದಾಯವನ್ನು ತಿಳಿಸುತ್ತದೆ ಜೊತೆಗೆ ಅದನ್ನು ಮುರಿದ ವಿದ್ಯಾವಂತ ಯುವಕ ಜನರಿಂದ ತಿರಸ್ಕಾರಕ್ಕೆ ಒಳಗಾಗಿ ಅದರ ವಿರುದ್ಧ ಪ್ರತಿಭಟಿಸುವುದು ಈ ಕಥೆಯ ವಸ್ತುವಾಗಿದೆ. ಕೆಳವರ್ಗದ ಚಿಕ್ಕಣ್ಣ ಮೇಲ್ವರ್ಗದ 'ಕಮಲಿ'ಯನ್ನು ಪ್ರೀತಿಸಿ ತನ್ನ ಹಿರಿಯರು ಊರಿನ ಯಜಮಾರ ಮಾತು ಮೀರಿ ಮದುವೆಯಾಗಿ ಊರು ಬಿಟ್ಟು ಪರ ಊರಲ್ಲಿ ಬದುಕುತ್ತಾನೆ. ಹನ್ನೆರಡು ವರ್ಷದ ನಂತ ತನ್ನ ಅಜ್ಜಿಯ ಶವಸಂಸ್ಕಾರದ ಸಂದರ್ಭದಲ್ಲಿ ಬರುವ ಅವನನ್ನು ಊರಿನವರು ತಡೆಯೊಡ್ಡುತ್ತಾರೆ. ಕುಲಗಳ ಕಟ್ಟುಪಾಡು ಎಷ್ಟು ಬಿಗಿಯಾಗಿದೆ ಎಂಬುದು ಈ ಕಥೆಯಿಂದ ತಿಳಿದು ಬರುತ್ತದೆ. ನಂತರ ಚಿಕ್ಕಣ್ಣ ಒಬ್ಬನೇ ತನ್ನ ಮನೆಯ ಗಳುಗಳನ್ನೇ ಹಿರಿದು ಚಿತೆಯನ್ನು ಮಾಡಿ ಅಜ್ಜಿಯ ಶವಸಂಸ್ಕಾರ ಮಾಡುವ ಮೂಲಕ ಸಂಪ್ರದಾಯಗಳ ವಿರುದ್ಧ ಅವನಿಗಿರುವ ರೋಷವನ್ನು ವ್ಯಕ್ತಪಡಿಸುತ್ತಾನೆ.

'ದತ್ತ' ಕಥೆಯಲ್ಲಿ ಮಗ ಆನಂದನನ್ನು ದತ್ತು ಕೊಟ್ಟು ಹದಿನಾರು ವರ್ಷದ ನಂತರ ತಂದೆ ತಾಯಿಯ ಮುಖವನ್ನು ಎಣ್ಣೆಯಲ್ಲಿ ನೋಡಬೇಕು ಎಂಬ ಹಿರಿಯರ ಅಪ್ಪಣೆಯಂತೆ ನಡೆಯುವ ಸಂಪ್ರದಾಯ ಹಳ್ಳಿಯ ಜನರ ನಂಬಿಕೆಗೆ ಹಿಡಿದ ಕನ್ನಡಿಯಂತಿದೆ. ಹಾಗೂ ಆನಂದನ ತಂದೆ ತಾಯಿಯರ ಸ್ವಾರ್ಥವೂ ಚಿತ್ರಿತವಾಗಿದೆ. ಆನಂದ ಹದಿನಾರು ವರ್ಷದ ಅನಂತರ ಊರಿಗೆ ಬಂದಾಗ ಎಲ್ಲವೂ ಅಲ್ಲಿ ಅವನಿಗೆ ಅಪರಿಚಿತವಾಗುತ್ತದೆ. ತಂದೆ ತಾಯಿಯರನ್ನು, ತಮ್ಮ- ತಂಗಿಯರನ್ನು ತನ್ನವರೆಂದು ಒಪ್ಪಿಕೊಳ್ಳಲು ಆಗುವುದಿಲ್ಲ ಅದಕ್ಕೆ ಆತ ತಂಗಿಯನ್ನು ಕುರಿತು "ನಾನು ನಿಂಗ ಅಣ್ಣ ಅಂತ ಅನ್ನಿಸ್ತದ ? [೨]" ಎಂದು ಪ್ರಶ್ನಿಸುತ್ತಾನೆ. ತಾನು ದತ್ತು

೧. ದೇವನೂರು ಮಹಾದೇವ : ಒಡಲಾಳ, ಸುವ್ವಾಲೆ ಪ್ರಕಾಶನ, ಕುವೆಂಪುನಗರ, ಮೈಸೂರು ೧೯೯೫, ಪುಟ - ೧೬.

೨. ಅದೇ ಪುಟ - ೩೪

ಹೋಗಿದ್ದ ಮನೆಯ ನೆನಪು - ಗೊಂದಲಗಳ ನಡುವೆ ಆನಂದನಿಗೆ ಚಿಟ್ಟು ಹಿಡಿಯುತ್ತದೆ. ಈ ಮಧ್ಯೆ ತನ್ನ ತಂದೆ ಅವನನ್ನು ಮದುವೆಗೆ ಪ್ರೋತ್ಸಾಹಿಸಿದಾಗ ಆತನಿಗೆ ಸಿಡಿಮಿಡಿಯಾಗಿ ಉಸಿರು ಕಟ್ಟಿ 'ಇದೆಲ್ಲ ಆಗೊಲ್ಲ' ಎಂದು ಎದ್ದು ಹೊರಹೋಗುತ್ತಾನೆ. ಇಲ್ಲಿ ತಂದೆಯ ಉದ್ದೇಶ ಒಬ್ಬಳೆ ಮಗಳಿರುವ ಶ್ರೀಮಂತರ ಮನೆಗೆ ಮತ್ತೆ ದತ್ತು ಕೊಡುವುದಾಗಿರುತ್ತದೆ. ಇದಕ್ಕೆ ಒಪ್ಪದ ಆನಂದನಿಗೆ ತನ್ನ ಊರಿನ ಮಣ್ಣಿಗೆ ಹೊಂದಿಕೊಳ್ಳಲು ಕಷ್ಟವಾಗಿ "ನಿಮ್ಮ ಮಗ ನಿಮ್ಮ ಪಾಲಿಗೆ ಇಲ್ಲ" ಎಂದು ಪತ್ರ ಬರೆದಿಟ್ಟು ರಾತ್ರೋ ರಾತ್ರಿ ಊರು ಬಿಟ್ಟು ಹೊರಟು ಹೋಗುತ್ತಾನೆ. ಆಗ ಅವನ ಅಪ್ಪ ಪೆಟ್ಟಿಗೆ ತೆರೆದು ನೋಡಿ "ಹಣ ಮುಟ್ಟಿಲ್ಲ" ಎಂದಾಗ ಅವರ ಪ್ರೀತಿಯ ಮೌಲ್ಯ ಎಂಥದು ಎಂದು ತಿಳಿಯುತ್ತದೆ. ಈ ಕಥೆಯಲ್ಲಿ ಸ್ವಾರ್ಥ ತಂದೆ ತಾಯಿಗಳ ನಡುವೆ ಸಿಕ್ಕಿಕೊಂಡ ಆನಂದನಿಗೆ ಗೊಂದಲ ದಿಗಿಲುಂಟಾಗಿ ಅವರಿಂದ ದೂರವಾಗುತ್ತಾನೆ.

'ಡಾಂಬರು ಬಂದುದು' ಕಥೆಯು ಹಳ್ಳಿಗಳಿಗೆ ನಾಗರೀಕತೆಯ ಪ್ರವೇಶ ಆದಾಗ ಉಂಟಾಗುವ ಗಲಿಬಿಲಿ - ಗೊಂದಲಗಳನ್ನು ಚಿತ್ರಿಸುತ್ತದೆ. ಈ ಕಥೆ ನಡೆಯುವುದು ದೇವನೂರಿನಲ್ಲಿಯೇ. ಮೊದಲು ತಮ್ಮ ಊರಿನ ರಸ್ತೆಗಳಿಗೆ ಥಾರುಹಾಕಲು ಬಂದ ಯಂತ್ರಗಳನ್ನು ಕಂಡು ಜನರ ಪ್ರತಿಕ್ರಿಯೆ, ಟಾರನ್ನು ಜನರು ಉಪಯೋಗಿಸುವ ರೀತಿ. ಆ ಟಾರಿನಿಂದ ಆದ ಅವಾಂತರಗಳನ್ನು ಇಲ್ಲಿ ಚಿತ್ರಿಸಲಾಗಿದೆ.

ಊರಿನ ರೋಡಿಗೆ ಡಾಂಬರು ಹಾಕುವ ಹಣದಲ್ಲಿ ಸ್ವಲ್ಪ ಉಳಿಸಿ ದೇವಸ್ಥಾನ ಊರ್ಜಿತಗೊಳಿಸುವ ಯೋಜನೆ ಪಟೇಲರದ್ದಾಗಿರುತ್ತದೆ. ಇದನ್ನು ತಿಳಿದ ಓದಿದ ಹುಡುಗರಾದ ಲಕುಮ, ರಾಜಪ್ಪ, ಶಂಭು, ಮಾದು, ಅವರು ಸರ್ಕಾರದ ಹಣವನ್ನು ದುರುಪಯೋಗ ಮಾಡುವ ಬಗ್ಗೆ ಮೇಲಿನ ಅಧಿಕಾರಿಗಳಿಗೆ ಪತ್ರ ಬರೆದರು. ಇದರಿಂದ ಊರಿನವರು ಚಾವಡಿಯಲ್ಲಿ ನ್ಯಾಯ ಸೇರಿದರು. ಆಗ ಊರಿನವರೆಲ್ಲಾ ಒಂದು ಕಡೆ, ಈ ಹುಡುಗರು ಒಂದು ಕಡೆ ನಿಂತು ವಾದಿಸುತ್ತಾರೆ. ಆಗ ಪಟೇಲರು "ಅದ್ರಲ್ಲಿ ಏನ್ರಯ್ಯ ನೀವುಗಳು ಅನ್ಯಾಯ ಕಂಡದ್ದು? ಎಂಬುದಕ್ಕೆ ರಾಜಪ್ಪ, ಯಾವ ಹಾಣನೋ ಯಾವುದಕ್ಕೊ ಹಾಕಿದ್ರೆ ಇನ್ನೇನ ಆಗೊದು?" ಎಂದು ಕೇಳಿದರು. ಆಗ ಊರಿನವರೆಲ್ಲಾ ನಿಮ್ಗ ದೇವ್ರು ದಿಂಡ್ರು ಹಿರೀಕರು ಅಂತ ಒಬ್ಬರೂ ಇಲ್ವಾ?"[೪] ಎಂದು ಪ್ರಶ್ನಿಸಿದರು. ನಂತರ ಹೀಗೆ ನ್ಯಾಯದಲ್ಲಿ ಮಾತಿಗೆ ಮಾತು ಬಂದು ಪಟೇಲರು ಚಾವಡಿಯಲ್ಲಿ ಎದ್ದು ನಿಂತರು. ಆಗ ಮೇಲೆ ಕಟ್ಟಿದ್ದ ಲ್ಯಾಟೀನು ಅವರ ತಲೆಗೆ ಬಡಿದು ಗಾಜು ಒಡೆದು ಬೆಳಕು ಹೋಯಿತು. ಅನಂತರ ಎಲ್ಲರೂ ತಮ್ಮ ತಮ್ಮ ಮನೆ ಸೇರಿದರು. ಈ ಘಟನೆಯಲ್ಲಿ ಊರಿನ ಯಜಮಾನರು ತಮಗಿಷ್ಟ ಬಂದ ಹಾಗೆ ಕಾನೂನು ರೂಪಿಸಿ ತಮ್ಮಿಚ್ಛೆಯಂತೆಯೇ ಅವರು ನಡೆಯುತ್ತಿದುದನ್ನು ಓದಿದ ಹುಡುಗರು ಪ್ರಶ್ನಿಸುವ ರೀತಿಯು ಆಗ ತಾನೆ ಹಳ್ಳಿಗಳಿಗೆ ಶಾಲೆಗಳು ಮತ್ತು ಶಿಕ್ಷಣದ ಪ್ರವೇಶದಿಂದ ನಾಗರೀಕತೆ ಕಾಲಿಟ್ಟು ಆಳುವ ವರ್ಗವನ್ನು ಪ್ರಶ್ನಿಸುವ ಹಕ್ಕನ್ನು ಸಾಮಾನ್ಯರೂ ಪಡೆಯುವಂತಾಗುತ್ತಿತ್ತು ಎಂಬುದನ್ನು ತಿಳಿಯಬಹುದು.

'ಮೂಡಲ ಸೀಮೇಲಿ ಕೊಲೆ ಗಿಲೆ ಮುಂತಾಗಿ' ಎಂಬ ಕತೆಯಲ್ಲಿ ಮೆಲು ನೋಟಕ್ಕೆ ಯಾವ ಕೊಲೆಯೂ ನಡೆಯುವುದಿಲ್ಲ. ಇಲ್ಲಿ ಇಡೀ ದಲಿತ ವರ್ಗದ ಬಡಜನರ ಶೋಷಣೆಯ ಚಿತ್ರಣವಿದೆ. ಈ ಕತೆಯ ಪ್ರಧಾನ ಪಾತ್ರ ದಾರಿ 'ರಂಗಪ್ಪ' ಗೌಡರ ಮನೆಯ ಕೆಲಸಗಾರ. "ಅವನು ಹುಟ್ಟಿದಾರಭ್ಯ ದಿನಂಪ್ರತಿ ಊರ ಗೌಡರ ಹೊಲದಲ್ಲಿ ಹಗಲು ಮಾಡುತ್ತಾ ಬಂದಿರವನು ಅವನು ಮಾಡೊ ಉಳಮಿಗೆ ಗೌಡ್ರ ಹಟ್ಟಿ ಕಂಬ ನಿಂತಿದೆ ನೋಡಿ ಅಂತ ಊರವರು ಅಂತಾರೆ"[೫] ಎನ್ನುವಲ್ಲಿ ಗೌಡರ ಹೊಲದಲ್ಲಿ ಯಾವ ರೀತಿ ಕೆಲಸ

೪. ದೇವನೂರು ಮಹಾದೇವ : ಒಡಲಾಳ, ಸುವ್ವಾಲೆ ಪ್ರಕಾಶನ, ಕುವೆಂಪುನಗರ, ಮೈಸೂರು ೧೯೯೫, ಪುಟ - ೪೧.
೫. ಅದೇ ಪುಟ - ೪೯

ಮಾಡುತ್ತಿದ್ದ ಎಂಬುದು ತಿಳಿದು ಬರುತ್ತದೆ. ಆದರೂ ತನ್ನ ಮನೆಯಲ್ಲಿ ಅನ್ನವಿಲ್ಲದೆ ಜೋಳಕ್ಕಾಗಿ ಗೌಡರ ಮನೆ ಬಾಗಿಲಿಗೆ ಹೋದಾಗ ಆತನಿಗೆ ಸಿಗುವುದು ತಿರಸ್ಕಾರ. ಅದೇ ಊರಿನ ಶಾಸ್ತ್ರಿ ಮಾತಿನ ಮೋಡಿಯಿಂದ ಬದುಕು ಸಾಗಿಸುತ್ತಾನೆ. ನರ್ಸಮ್ಮ ತನ್ನ ವಿದ್ಯೆಯಿಂದ ಜೀವನ ಸಾಗಿಸುತ್ತಾಳೆ. ಏನೂ ತಿಳಿಯದ ರಂಗಪ್ಪ ಗೌಡರ ಮನೆಯಲ್ಲಿ ರಟ್ಟೆ ಬೀಳುವವರೆಗೂ ದುಡಿದರೂ ಒಂದೊತ್ತು ಗಂಜೀಗೂ ಬಹಳ ಕಷ್ಟ ಪಡಬೇಕಾಗುತ್ತದೆ. ಮಗನಿಗೆ ಒಂದು ಚಡ್ಡಿಯೂ ಇರುವುದಿಲ್ಲ. ಇದು ದಲಿತ ಬಡವರ್ಗದ ಜನರ ದಯಾನೀಯ ಸ್ಥಿತಿ. ಆದರೆ ಅದೇ ದಲಿತ ವರ್ಗದ ಶಿಕ್ಷಕ ಅದೇ ಊರಿಗೆ ಬಂದಾಗ ಆತನಿಗೆ ಅಪಾರ ಗೌರವ ಸಿಗತ್ತದೆ. ಏಕೆಂದರೆ ಆತನಿಗೆ ಶಿಕ್ಷಣದ ಸ್ಪರ್ಶವಾಗಿದೆ. ಆದ್ದರಿಂದಲೇ ಎಲ್ಲರಿಗೂ ಶಿಕ್ಷಣ ಸಿಕ್ಕಾಗ ಶೋಷಣೆಯಿಂದ ಮುಕ್ತಿ ಸಾಧ್ಯವೆಂದು ಲೇಖಕರ ಅಭಿಮತ. ದಲಿತರ ದಯಾನೀಯ ಸ್ಥಿತಿಯ ಚಿತ್ರಣದ ಜೊತೆಗೆ ನಾಗರೀಕತೆ ಮತ್ತು ಶಿಕ್ಷಣ ಪಡೆಯುವುದರಿಂದ ಜೀವನ ಸ್ಥಿತಿಯ ಸುಧಾರಣೆ ಸಾಧ್ಯ ಎಂಬುದು ರಂಗಪ್ಪನ ಮಗ ರಾಜ ತನ್ನ ತಾಯಿಯೊಡನೆ ನಡೆಸುವ ಸಂಭಾಷಣೆಯಿಂದ ವ್ಯಕ್ತವಾಗುತ್ತದೆ. ರಾಜು, ತಾಯಿಯನ್ನು ಕುರಿತು "ನೋಡವ್ವ, ನೋಡವ್ವ ಪಟೇಲ್ರ ಶಂಬಪ್ಪ ಅವ್ನಲ್ಲ, ಅವ ಅವ ನನ್ನ ರಾಜ ಅನ್ನಕಿಲ್ವಂತೆ" ಅಂದ ಪಾರೋತಿ ಯಾಕಂತ " ಅಂತ ತಲೆ ರಾಜ - ನೀವು ವಲಾರ್‍ರ್ರು ಕಲಾ, ಅದ್ಕ ನಿನ್ನ ರಾಜ ಅನುಕಿಲ್ಲ, ಗೀಜ ಅಂತನಿ ಅಂದ. ಅನಂತರ ಪಾರ್ವತಿ "ನೀಜಾಣಕಣಪ್ಪ ಅವ್ರ ಸಿಂತಗೆಲ್ಲಾ ಹೋಗ್ಬೇಡ" ಎಂದು ಮಗನನ್ನು ಸಂತ್ಯಾಸಿದಳು. ಇಲ್ಲಿ ಮಗ ಪ್ರಶ್ನಿಸುವುದನ್ನು ತಾಯಿ ಸುಮ್ಮನಿರುತ್ತಾಳೆ. ಈ ಇಬ್ಬರಿಗೂ ವ್ಯತ್ಯಾಸ ಆಕೆ ಏನೂ ತಿಳಿಯದ ಮುಗ್ದ ದಲಿತ ವರ್ಗದವಳು ಮಗ ಶಿಕ್ಷಣ ಪಡೆದುದರಿಂದ ಈ ರೀತಿ ಪ್ರಶ್ನಿಸುತ್ತಾನೆ. ಈ ಮೂಲಕ ಲೇಖಕರು ದಲಿತ ವರ್ಗದಲ್ಲೂ ಬದಲಾವಣೆಯ ಗಾಳಿ ಬೀಸುತ್ತಿದೆ ಎನ್ನುವ ಸೂಚನೆ ನೀಡಿದ್ದಾರೆ. ಜೊತೆಗೆ ರಂಗಪ್ಪನ ಪೀಳಿಗೆಯ ದಲಿತರ ಸ್ಥಿತಿಯನ್ನು ಚಿತ್ರಿಸುತ್ತಾರೆ.

ಜೋಳ ಕೇಳಲು ಹೋದ ರಂಗಪ್ಪನಿಗೆ ಗೌಡರ ಹೆಂಡತಿ ಇಲ್ಲವೆಂದು ಹೇಳಿ ಸೌದೆ ಸೀಳಲು ಹೇಳುತ್ತಾಳೆ. ಆಗ ರಂಗಪ್ಪ ಊಟವಿಲ್ಲ ನಿತ್ರಾಣನಾಗಿದ್ದರಿಂದ ಸೌದೆ ಸೀಳಲು ಆಗದೆ ನೆಲಕ್ಕೆ ಕುಸಿಯುತ್ತಾನೆ. ಕಣ್ಣು ಕಾಣದಾಗುತ್ತದೆ. ಇಲ್ಲಿ "ಆರ್ಥಿಕವಾಗಿ ಸಾಮಾಜಿಕವಾಗಿ ರಂಗಪ್ಪನ ತಣ್ಣನೆಯ ಕೊಲೆಯಾಗುತ್ತಿರುವುದನ್ನು ಕಾಣುತ್ತೇವೆ."[೧] ಈ ಕತೆಯಲ್ಲಿ ಒಟ್ಟು ಆರು ಭಾಗಗಳಿವೆ. ಒಂದೊಂದು ಭಾಗವೂ ಕತೆಗೆ ಪೂರಕವಾಗಿ ರಂಗಪ್ಪನ ದೀನತೆ ಶೋಷಣೆಗಳ ಚಿತ್ರಣವನ್ನು ಕೊಡುತ್ತದೆ.

ಈ ಸಂಕಲನದ ಕೊನೆಯ ಕಥೆ 'ಅಮಾಸ'. ಈ ಕಥೆಯಲ್ಲಿ ತಂದೆ, ತಾಯಿಯನ್ನು ಕಳೆದು ಕೊಂಡ ತಬ್ಬಲಿ ಅಮಾಸನ ಬೆಳವಣಿಗೆಯ ಚಿತ್ರಣವಿದೆ. ಹಳ್ಳಿಯ ಮಾರಿ ಹಬ್ಬದ ಚಿತ್ರಣ, ಪಾನಮತ್ತನಾದ ಗ್ಯಾಂಗ್ ಮ್ಯಾನ್ ಸಿದ್ದಪ್ಪನ ಮಾತುಗಳಲ್ಲಿ ದಲಿತರ ಆಕ್ರೋಶ, ಸಿಟ್ಟು, ಅಸಾಹಯಕತೆಗಳಿವೆ. ಆತ" ರಾಜಕಾರಣಿಯನ್ನೊ ರೈಲ್ವೆ ಬಾಸನ್ನೊ ಸಾಲ ಕೊಡುವ ಮಾದಪ್ಪನ್ನೊ ಅಣಿ ಮಾಡಿಕೊಂಡು ಥೂ ಸೂಳೆ ಮಗ್ನ ಬಿಳಿ ಬಟ್ಟೆ ಹಾಕ್ಕೊಂಡು ದೇಸ ಸುತ್ತಿ ದೊಡ್ಡವ ಆಗ್ಬಿ ಏನ್ಲೆ ? ನನ್ನ ಕಂಡ್ರ ನೀನು ಮೂಗ ಮುಚ್ಕೊಳ್ಳಿಯಾ ನಾವಾದ್ರು ಪರದೇಸಿಗಳಪ್ಪ ಎಲ್ಲಂದ್ರ ಅಲ್ಲಿ ಬೀದೇಲಿ ಬಿದ್ದಿರುತ್ತೇವೆ. ಎಂದು ಜೋರಾಗಿ ಕಿರುಚಿ ಬ್ಯಾಡ್ರಪ್ಪೋ ಬಾಡ ನಿಮ್ಮ ಕಾರ ನಮ್ಮ ಮ್ಯಾಲ ಬುಡಬ್ಯಾಡ್ರಪ್ಪೊ ನನ್ಮಾತ ಕೇಳಿ ನಗ್ತಾನೆ ನೋಡ್ರಪ್ಪೊ, ನಗಪ್ಪಾ ನಗು, ನಿಂಗ ನಗೊ ಕಾಲ, ನೀ ಏನ ಮಾಡ್ತಿ, ನಗ್ದೆ ನಗು ಮಗ್ನೆ"[೨] ಎನ್ನುವಲ್ಲಿ ದಲಿತರಿಗೆ ಆಳುವವರ್ಗಗಳಾದ ಆಜಕಾರಣಿಗಳು

೧. ಅರವಿಂದ ಮಾಲಗತ್ತಿ : ದಲಿತ ಮಾರ್ಗ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೩, ಪುಟ - ೩೫೯

೨. ದೇವನೂರು ಮಹಾದೇವ : ದ್ಯಾವನೂರು ಮತ್ತು ಒಡಲಾಳ, ನವ್ವಾಲೆ ಪ್ರಕಾಶನ, ಮೈಸೂರು ೧೯೯೪, ಪುಟ - ೬೫

ಅಧಿಕಾರಿಗಳು ಮತ್ತು ಸಾಲ ನೀಡುವ ಶ್ರೀಮಂತರ ಮೇಲಿನ ಆಕ್ರೋಶವಿದೆ. ಆದರೂ ಏನೂ ಮಾಡಲಾಗದ ಅಸಹಾಯಕತೆ ಅವರಲ್ಲಿದೆ.

"ಈ ಕಥಾ ಸಂಕಲನದ 'ಗ್ರಸ್ತರು', 'ಒಂದು ದಹನದ ಕಥೆ', ಮತ್ತು 'ದತ್ತ' ಕಥಗಳಲ್ಲಿ ವೈಚಾರಿಕತೆ ಸಮಾಜದ ಕಟ್ಟು ಪಾಡುಗಳ ಕಪಿಮುಷ್ಟಿ ಇವುಗಳು ಕಂಡುಬಂದರೆ, ಮಾರಿಕೊಂಡವರು, ಮೂಡಲ ಸೀಮೇಲಿ ಕೊಲೆಗಿಲೆ ಮುಂತಾಗಿ' ಮತ್ತು 'ಅಮಾಸ' ಕಥೆಗಲ್ಲಿ ದೀನದಲಿತರ, ಸಮಾಜದಲ್ಲಿ ಶೋಷಣೆಗೆ ಒಳಗಾಗಿರುವವರ ಚಿತ್ರಣವಿದೆ."[೮] ಒಟ್ಟಾರೆ ಭಾಷಾ ಶೈಲಿ, ನಿರೂಪಣಾ ವಿಧಾನ, ಮತ್ತು ಅಭಿವ್ಯಕ್ತಿಯ ವೈಶಿಷ್ಟ್ಯತೆಯಿಂದ ದ್ಯಾವನೂರು ಒಂದು ಶ್ರೇಷ್ಠ ಕಥಾ ಸಂಕಲನವಾಗಿದೆ.

ಕನ್ನಡ ದಲಿತ ಕಥಾ ಸಾಹಿತ್ಯದಲ್ಲಿ ವಿಶ್ವ ಶ್ರೇಷ್ಠ ಕಥೆಗಾರರ ಸಾಲಿನಲ್ಲಿ ಸೇರಬಹುದಾಗಿರುವ ಪ್ರಖ್ಯಾತ ಕಥೆಗಾರರಾದ ದೇವನೂರು ಮಹಾದೇವ ಅವರ 'ದ್ಯಾವನೂರು' ಮತ್ತು ಮೊಗಳ್ಳಿ ಗಣೇಶ್ ಅವರ 'ಬುಗುರಿ', 'ಅತ್ತೆ', 'ಭೂಮಿ' ಸಂಕಲನಗಳ ಜೊತೆಗೆ ಅರವಿಂದ ಮಾಲಗತ್ತಿಯವರ 'ಮುಗಿಯಿದ ಕಥೆಗಳು', ಮುಳ್ಳೂರು ನಾಗರಾಜ 'ಅವರ ಸಿಂಗಳೀಕ' ಮನಜರ 'ಬುರುಡೆಗೆ ಸ್ವರ್ಗ' ಬಿ.ಟಿ. ಲಲಿತಾ ನಾಯಕ್ ಅವರ 'ಹಬ್ಬ ಮತ್ತು ಬಲಿ' ಚೆನ್ನಣ್ಣ ವಾಲಿಕಾರ ಅವರ 'ಕಪ್ಪು ಕತೆಗಳು', ಸೋಮಣ್ಣ ಹಂಗಳ್ಳಿಯವರ 'ತಮಟೆ' ಮುಂತಾದವು ಬದವು. ಇವುಗಳಲ್ಲಿ ದೇವನೂರು ಮಹಾದೇವ ಅವರ 'ದ್ಯಾವನೂರು' ಕಥಾ ಸಂಕಲನ ಕನ್ನಡ ದಲಿತ ಕಥಾ ಲೋಕಕ್ಕಲ್ಲದೇ ಇಡೀ ಭಾರತ ಕಥಾಲೋಕಕ್ಕೆ ಒಂದು ಮಹಾನ್ ಕೊಡುಗೆಯಾಗಿದೆ.

---

೮. ಅರವಿಂದ ಮಾಲಗತ್ತಿ : ದಲಿತ ಮಾರ್ಗ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೩, ಪುಟ - ೩೫೬

## ದಲಿತ ಕಾದಂಬರಿಗಳು

ದಲಿತ ಕಾದಂಬರಿ ಲೋಕದಲ್ಲಿ ಮಹತ್ತರ ಪಾತ್ರ ವಹಿಸುವ ಲೇಖಕರಲ್ಲಿ ದೇವನೂರು ಮಹಾದೇವ, ಮ.ನ.ಜವರಯ್ಯ ಅರವಿಂದ ಮಲಗತ್ತಿ, ಶಿವರುದ್ರ ಕಲ್ಲೋಳಿಕರ ಮತ್ತು ಮುಳ್ಳೂರು ನಾಗರಾಜ ಅವರು ಪ್ರಮುಖರು. ಇವರೆಲ್ಲರಲ್ಲಿರಲ್ಲಿ ದೇವನೂರರ ಕಾದಂಬರಿಗಳಾದ 'ಒಡಲಾಳ' ಮತ್ತು 'ಕುಸುಮ ಬಾಲೆ'ಗಳಿಗೆ ಸಾಹಿತ್ಯ ಕ್ಷೇತ್ರದಲ್ಲಿ ಸಿಕ್ಕ ಸ್ಥಾನ ಅದ್ವಿತೀಯವಾದುದು. ಅಂತೆಯೇ ಮ.ನ. ಜವರಯ್ಯ ಅವರ 'ಮಾಗಿ' ಮತ್ತು 'ಸೂರಪ್ಪ', ಮಾಲಗತ್ತಿಯವರ 'ಕಾರ್ಯ', ಮುಳ್ಳೂರು ನಾಗರಾಜ ಅವರ 'ಮರಣ ಮಂಡಲ ಮಧ್ಯದೊಳಗೆ', ಶಿವರುದ್ರ ಕಲ್ಲೋಳಿಕರ್ ಅವರ 'ಹೊಲಗೇರಿಯ ರಾಜಕುಮಾರ' ಕಾದಂಬರಿಗಳು ಮುಖ್ಯವಾದವು.

ದಲಿತ ಸಾಹಿತ್ಯದಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನ ಹೊಂದಿರುವ ದೇವನೂರು ಮಹಾದೇವ ಅವರು ಬರೆದದ್ದು ಬಹಳ ಕಡಿಮೆಯಾದರೂ ಅತ್ಯುನ್ನತ ಮೌಲ್ಯ ಯುತವಾದ ಬರವಣಿಗೆಯನ್ನು ನೀಡಿದರು. ಅವರ 'ಒಡಲಾಳ'ವು ದಲಿತ ಸ್ತ್ರೀಯೊಬ್ಬಳ ಮೂಲಕ ಇಡೀ ದಲಿತ ಬದುಕಿನ ಸ್ಥಿತಿಯನ್ನು ಅನಾವರಣ ಮಾಡಿದ ಕಾದಂಬರಿಯಾಗಿದೆ. ಇಲ್ಲಿ ಕಥೆ ನಡೆಯುವುದು ಸಾಕವ್ವ ಮತ್ತು ಅವಳ ಕುಟುಂಬ ಅಂದರೆ ಮಕ್ಕಳು, ಸೊಸೆ, ಮೊಮ್ಮಕ್ಕಳು ಮತ್ತು ಹುಂಜ, ಈ ಹಂದರದೊಳಗೆ ಒಂದು ವ್ಯವಸ್ಥೆಯಲ್ಲಿನ ದಲಿತ ಬದುಕಿನ ಸ್ಥಿತಿಯನ್ನು ವಿವರಿಸಲು ಪ್ರಯತ್ನಿಸುತ್ತವೆ. ಇಡೀ ಕಥೆಯಲ್ಲಿ ಸಾಕವ್ವ ಪಾಲಕಿಯಾಗಿ ಕಂಡು ಬರುತ್ತಾಳೆ. ತನ್ನ ಹುಂಜ ಕಾಣೆಯಾದಾಗ ಬೆಳಗಾದರೂ ಮಲಗಿದ್ದ ಮಗನ್ನು ಎಬ್ಬಿಸಲು ಹೋದಾಗ ಆತ "ಹೊತ್ಮೂಡ್ಲಿ ಈಗ ಮಲಿಕಮ್ವಾ" ಎಂದಾಗ ಸಾಕವ್ವ "ಏನಂದೆ ನನ ಕಂದಾ ! ಹೊತ್ಮೂಡ್ಲಿ ಅಂದ್ಯ. ಹೊತ್ಮೂಡಿ ಏಡು ಮಾರು ಬಂದ್ರೂನೂ ನೀನು ಏಳ್ಲೆ ಇದ್ದುದಕ್ಕಲ್ವ ನನ್ನಟ್ಟ ಮಾರೂ ಪಾಲಾದ್ದು............." ಎಂದು ಮಾತು ಮುಗಿಸಿ ಹಣೆ ಚೆಚ್ಚಿಕೊಳ್ಳುತ್ತಾಳೆ."[೧] ಇಲ್ಲಿ ತನ್ನ ಕುಟುಂಬದ ಪಾಲನೆಯಲ್ಲಿ ತನ್ನ ಜವಾಬ್ದಾರಿಯನ್ನು ತೋರಿಸುತ್ತಾಳೆ. ಹುಂಜನನ್ನು ಹುಡುಕಲು ತಾನೇ ಹೋಗಿ ಎಲ್ಲರ ಮನೆಯ ತಿಪ್ಪೆಯನ್ನು ಪರೀಕ್ಷಿಸುತ್ತಾಳೆ. ಕೊನೆಗೆ ಫಲ ಸಿಗದೆ ಸಾಕಾಗಿ "ನನ್ನ ಮನೆ ದೇವು ಸತ್ಯ ಇದ್ರ ನನ್ನುಂಜ ಹಟ್ಟೋಗಿರಲ್ಲಿ ಇಲ್ಲದಿದ್ರ ಇಲ್ಲ"[೨] ಎಂದು ಮನೆಗೆ ಹೋಗುತ್ತಾಳೆ.

ಮನೆಗೆ ಬಂದ ಸಾಕವ್ವ ಅಂಗಳದೊಳಗೆ ಕುಂತು ನನ್ನ ಕೋಳಿ ತಿಂದವರ ಮನೆ ಮಣ್ಣಾಗ್ಲೋ ಎಂದು ಶಪಿಸುತ್ತಾಳೆ. ಸಂಜೆಯ ಹೊತ್ತಿಗೆ ಮೊಮ್ಮಗ ಶಿವೂನ ಕರೆದುಕೊಂಡು ಎಲ್ಲರ ಮನೆಗೆ ಸಾರು ಕೇಳುವ ನೆಪದಲ್ಲಿ ತನ್ನ ಕೋಳಿ ಹಿಡಿದು ಸಾರುಮಾಡಿರಬಹುದು ಎಂದು ತಿಳಿಯಲು ಹೋದಾಗ ಸಾಕಾವ್ವನಿಗೆ ನಿರಾಶೆಯಾಗುತ್ತದೆ. ಕೊನೆಗೆ ತನ್ನ ಕೋಳಿ ಹುಡುಕಿಕೊಡಿ ಎಂದು ಪೋಲಿಸ್ ಇನ್ಸ್‌ಪೆಕ್ಟರ್‌ಗೆ ಹೇಳುವ ಸಾಕವ್ವ ಆ ಕೋಳಿ ಹುಂಜವು ಹೇಗಿತ್ತು ಎಂದು ತೋರಿಸಲು ಹೋಗಿ ಅದನ್ನು ಕಳೆದು ಕೊಳ್ಳುತ್ತಾಳೆ. "ಒಂದು ಜಾನಪದ ಹೆಣ್ಣಿನ ಗುಣಗಳಾದ ಮುಗ್ಧತೆ, ಪ್ರೀತಿ, ದುಃಖ ಬೈಗಳುಗಳ ಮೂಲಕ ಪ್ರಕಟವಾಗುವ ರೋಷ. ಈ ಗುಣಗಳಿಂದ ಕೂಡಿದ ಸಾಕವ್ವ ತನ್ನ ಮುಗ್ಧತೆಯ ಕಾರಣದಿಂದಾಗಿ ಎಲ್ಲವನ್ನು ಕಳೆದು ಕೊಳ್ಳುತ್ತಾಳೆ."[೩] ಹೀಗೆ ದಲಿತರ ಬದುಕಿನ ಮುಗ್ಧತೆ ಜನಪದೀಯವಾಗಿ ಮೆಚ್ಚುಗೆಯ ಮೌಲ್ಯವಾದರೆ ಶಿಷ್ಟ ಪ್ರಪಂಚದಲ್ಲಿ ಶೋಷಣೆಗೆ ಒಳಗಾಗುವ ದೌರ್ಬಲ್ಯವಾಗುತ್ತದೆ.

---

೧. ದೇವನೂರು ಮಹಾದೇವ : ಒಡಲಾಳ, ನವ್ಯಾಲೆ ಪ್ರಕಾಶನ, ಕುವೆಂಪುನಗರ, ಮೈಸೂರು ೨೦೦೩, ಪುಟ - ೨

೨. ಅದೇ ಪುಟ - ೫

೩. ಬರಗೂರು ರಾಮಚಂದ್ರಪ್ಪ : ಸಾಹಿತ್ಯ ವಿಮರ್ಶೆ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು ೧೯೯೨, ಪುಟ - ೧೩೬.

ಸಾಕವ್ವನ ಕುಟುಂಬ ಕಾದಂಬರಿಯುದ್ದಕ್ಕೂ ಶೋಷಣೆಗೆ ಒಳಗಾದರೂ ಅದಕ್ಕೆ ತನ್ನದೇ ಆದ ಅಸ್ತಿತ್ವವಿದೆ. ಅಲ್ಲಿ ಮಾನವೀಯ ಸಹ ಸಂಬಂಧವಿದೆ. ಸಾಕವ್ವನ ಮುಗ್ಧ ಮಗಳು ಗೌರಮ್ಮ, ಕಿರಿಮಗಳು ಪುಟ್ಟಗೌರಿ, ಗಂಡು ಮಕ್ಕಳಾದ ಕಾಳಣ್ಣ, ಸಣ್ಣಯ್ಯ, ಗುರುಸಿದ್ಧ, ಮತ್ತು ಮೊಮ್ಮಕ್ಕಳೊಂದಿಗೆ ನಡೆಸುವ ಜೀವನದಲ್ಲಿ ಸಾಮಾನ್ಯ ಕುಟುಂಬದ ಎಲ್ಲಾ ಲಕ್ಷಣಗಳೂ ಇವೆ. ಶಿವೂನ ಮುಗ್ಧತೆ, ಪುಟಗೌರಿಯ ಯೌವನ ಸಹಜ ನೇರ ಜೀವನೋತ್ಸಾಹ ಸಾಕವ್ವನ ಸ್ವಾಭಿಮಾನ, ಅತ್ತೆ ಸೊಸೆ, ತಾಯಿ ಮಗರ ಕಲಹಗಳು - ರಾಜಿ ಇತ್ಯಾದಿಗಳು ಅವರ ಜೀವನದಲ್ಲಿ ಸಾವಯವ ಸಂಬಂಧ ಹೊಂದಿದೆ.

ಒಂದು ಸಾರಿ ಸಾಕವ್ವ ತನ್ನ ಮಗನ ಜೊತೆ ಕಲಹಕ್ಕಿಳಿದು "ಹುಟ್ಟಿದ್ದು ಹೆಣ್ಣೆಂಗ್ಸಾದರೂ ಗಂಡ್ಸ ಮೀರಿ ಕಚ್ಚೆಕಟುಕಂಡು ಗೇದು ಸಂಪಾದ್ಸಿವ್ನಿ ಕನೊ ಭೂಪತಿ. ಆಸ್ತಿ ನನ್ನ ಸ್ವಾರ್ಜತ ಸ್ವಾರ್ಜತ............."[೪] ಎಂದು ಹೇಳುವಲ್ಲಿ ಅವಳ ಸ್ವಾಭಿಮಾನ ಮತ್ತು ಜನಪದೀಯ ಹೆಣ್ಣಿಗಿರಬೇಕಾದ ದಿಟ್ಟತನವನ್ನು ತೋರಿಸುತ್ತದೆ. ಸಾಕವ್ವನಿಗೆ ಹುಂಜ ಕಳಕೊಂಡು ಚಿಂತೆಯಲ್ಲಿದ್ದರೆ, ಕಿರಿಮಗಳು ಪುಟ್ಟಗೌರಿ, ಶಿವುನ ಕರದು 'ನವುಲು ಬರಿತೀನಿ ನೋಡ್ಕ', ಎಂದು ಗೋಡೆಯ ಮೇಲೆ ನವಿಲಿನ ಚಿತ್ರ ಬರೆದಳು. ಆಗ ಶಿವು ನವುಲು ನೋಡಿ ತಡಕೊಳ್ಳಕ್ಕಾಗದೆ ವುಜ್ಜೋ ಎಷ್ಟು ಚೆನ್ನಾಗಿದೆ ಎಂದು ಕುಣಿದಾಡಿತು. ತನ್ನ ಅಜ್ಜಿ ಸಾಕವ್ವನ್ನು "ಅಮ್ಮಯ್ ಪುಟಗೌರಿ ಚಿಕ್ಕ ನವುಲು ಬರದವಳೆ ! ನೋಡು ಬಾ ಅಂತು. ಅಜ್ಜಿ ಸಾಕವ್ವ ತಗಾ ಅದ್ಯಾರೊ ಒಬ್ಬಳು ಕುಟ್ಕೊ ಬತ್ತ ಬುಟ್ಟ ಹುಟ್ಕೋ ಶ್ಯಾಟ ನೋಡ್ಕತ್ತಿದ್ಲಂತೇ"[೫] ಎಂದು ಪ್ರತಿಕ್ರಿಯಿಸಿದಳು. ಇಲ್ಲಿ ಸಾಕವ್ವ ತನ್ನ ಯೋಚನೆಯಿಂದ ಇದ್ದರೆ, ಪುಟ್ಟಗೌರಿಯು ನವಿಲು ಬರೆಯುವುದರಲ್ಲಿ ತೊಡಗಿದ್ದುದು ಅವಳ ಯೌವ್ವನ ಸಹಜ ಜೀವನೋತ್ಸಾಹದ ಪ್ರತೀಕವಾಗಿದೆ.

ಸಾಕವ್ವ ತನ್ನ ಮೊಮ್ಮಗ ಶಿವುನ ಕರೆದುಕೊಂಡು ಕೋಳಿ ಹುಡುಕಲು ಹೋದಾಗ ಶಿವುಗೆ ಹೇಳುವ ಯಮ ಧರ್ಮನ ಕಥೆಯಲ್ಲಿ ಯಮನು ನಂಗೇನಾರು ಶಿಕ್ಷೆ ಕೊಟ್ಟರೆ "ಅಯ್ ನರಲೋಕದಲಿ ನಾನು ಪಟ್ಟಂಥ ಕಷ್ಟಕ ಆ ಸೀಕ್ಸ ಎಲ್ಲಾದ್ದು ತಗಾ"[೬] ಎನ್ನುವ ಮಾತು ದಲಿತರ ಬದುಕಿನ ದಾರುಣ ಸ್ಥಿತಿಯನ್ನು ತಿಳಿಸುತ್ತದೆ. ಇಲ್ಲಿನ ಬದುಕಿಗಿಂಥ ಯಮನ ನರಕವೇ ಪರವಾಗಿಲ್ಲ ಎಂಬ ಸಾಕವ್ವನ ಮಾತಿನಲ್ಲಿ ಇಡೀ ದಲಿತ ಜೀವನದ ಸಮಗ್ರ ಸಾರದ ನೋವಿದೆ. ಹಾಗೆ ಸಾಕವ್ವ ಮುಂದುವರೆದು ಯಮನಿಂದ ಕೇಳುವ ವರ "ನನ್ನ ಮೊಮ್ಮೊಗಸು ನರ ಲೋಕದಲ್ಲಿ ರಾಜ್ಯಭಾರ ಮಾಡುವಂಥ ವರ" ಇದು ಮುಂದೆ ದಲಿತರ ಬದುಕು ಸುಧಾರಣೆಯಾಗಲಿ ಎನ್ನುವ ಲೇಖಕರ ಆಶಯವಾಗಿದೆ. ಈ ರೀತಿಯ ಜೀವನದ ಸಂದರ್ಭಗಳನ್ನು ದಲಿತರ ಬದುಕಿನಲ್ಲಿ ಸಹಜವಾಗಿಯೇ ಚಿತ್ರಿಸಿರುವ ದೇವನೂರರು ಎಲ್ಲಾ ವಿನೋದದಿಂದ ಮತ್ತು ಪ್ರತಿಭಟನೆಯ ಸ್ವರೂಪದಿಂದ ಚಿತ್ರಿಸಿದ ಅಪಾರ ಸಂಯಮವನ್ನೂ ತೋರಿ ಸಮಗ್ರತೆಯನ್ನು ಸಾಧಿಸಿದ್ದಾರೆ.

ಊರಿನ ಸಾಹುಕಾರನ ಮನೆಯ ಕಡಲೆಕಾಯಿಯನ್ನು ಕದ್ದು ತಂದಾಗ ಮನೆಯಂಗಳದ ಒಲೆಯಲ್ಲಿ ಬೆಂಕಿ ಹಾಕಿದರು. " ಇಳಿದೇರುತ್ತಿದ್ದ ಬೆಂಕಿ ಮುಂದಕ್ಕೆ ಬಂದು ಸಾಕವ್ವ ಶಿವೂ ಕೂತರು ಆ ಬೆಂಕಿ ಉರಿ ಭೂಮತಾಯ ನಾಲುಗೆಯಂತೆ ಹೊಗೆ ಕಕ್ಕುತ್ತ ಸೊಳ್ಳೆ, ಕ್ರಿಮಿ ಕೀಟಾದಿಗಳ ಉಸುರು ಕಟ್ಟಿಸುತ್ತ ಅಲ್ಲಿಂದೆದ್ದು ಹಟ್ಟಿಯ ನಾಕಾ ಮೂಲಕವೂ ಚಾಚುತ್ತಿದ್ದು. ಕಾಳಣ್ಣನ ಹೆಡ್ತಿ ತರಲೆ ಪುರುಳೇನ ಉರಿಗೆ ತಳ್ಳುತ್ತ, ನಡುಮನೆಗೆ

೪. ದೇವನೂರು ಮಹಾದೇವ : ಒಡಲಾಳ, ನವ್ಯಾಲೆ ಪ್ರಕಾಶನ, ಕುವೆಂಪುನಗರ, ಮೈಸೂರು ೨೦೦೩, ಪುಟ - ೭

೫. ಅದೇ ಪುಟ -೧೭

೬. ಅದೇ ಪುಟ - ೨೦

ಬದ್ರವ್ವಾ ಅದೇನೆ ಮಾಡಿರಿ ಅಂದಳು. ಅಲ್ಲಿಂದ ಗೌರಮ್ಮ ಪುಟ್ಟಗೌರಿಯೂ ಬಂದರು. ಪುಟ ಗೌರಿ ಮುಖಕ್ಕೆ ಆ ಬೆಂಕಿ ಬೆಳಕು ಬಿದ್ದು ಅವಳ ಮುಖದಿಂದಲೇ ಬೆಳಕು ಅನ್ನೊಂದು ಹುಟ್ಟಿ ಉಳಿದ ಕಡೆಗೆ ಹೊಂಟತಿತ್ತು, ಅವರೆಲ್ಲರೂ ಕಡಲೇ ಕಾಯಿಗುಡ್ಡೆಗೆ ಕೈಯ್ಯಾಕುತ್ತ ಸಿಪ್ಪೇ ಬೆಂಕಿಗೆ ಎಸೆಯುತ್ತಿದ್ದರು."[೭]

ಒಂದು ಆಚರಣೆ ಎಂಬಂತೆ ವರ್ಣಿತವಾಗಿರುವ ಈ ಪ್ರಸಂಗ ಕತೆಯು ಅತ್ಯುತ್ತಮ ಭಾಗವಾಗಿದೆ. ಇದು ದೆವ್ವದ ರೂಪದಲ್ಲಿದ್ದ ಅವರ ಭಯಾನಕ ಹಸಿವನ್ನು ಒಂದು ಕಡೆ ಸಾಂಕೇತಿಸಿದರೆ ಮತ್ತೊಂದು ಕಡೆಯಲ್ಲಿ ತೀರ ಅನನ್ಯವಾದ ಅವರ ಮಾನವೀಯ ಸಂಬಂಧಗಳ ಪರಿಚಯ ಮಾಡಿಕೊಡುತ್ತದೆ. ಇಲ್ಲಿ ಅವರ ಎಲ್ಲಾ ನೋವುಗಳೂ ಮರೆಯಾಗುತ್ತವೆ. ಒಳ ಜಗಳ ಭಿನ್ನಾಭಿಪ್ರಾಯಗಳು ಗೌಣವಾಗುತ್ತವೆ. ಸಾಕವ್ವ ಒಬ್ಬ ದಲಿತ ಹೆಂಗಸಿರಬಹುದು. ಆದರೆ ಆಕೆಯು ಒಬ್ಬ ಅತ್ತೆ, ಒಂದು ಕುಟುಂಬದ ಹಿರಿಯ ಯಜಮಾನಿಯಾಗಿದ್ದಾಳೆ. "ಅತ್ಗಮ್ಮೋರ" ಎನ್ನೋ ದನಿ ಹೊರಗಿನಿಂದ ಬಂದಿತು. ಕಾಳಣ್ಣ ಹೆಡ್ತಿ ದಾರಂದ ತೆಗೆದು ಯಾರ? ಅಂತಲೆ ಕಾಳಕ್ಕನ ದನಿ ನಾನು ಎಂದಿತು. ಕಾಳಕ್ಕ ಆ ಕತ್ತಲಲ್ಲಿ ಕಾಣಿಸುವುದಿರಲಿಲ್ಲ. ಅವಳ ದನಿಯು ಅತ್ಗಮ್ಮೋರ ನನಗಂಡು ಅಸ್ಕಂಡು ಅಳ್ತಮಲಗದ ಮೂರು ದಿನದಿಂದ ಕಂಬಳಕ್ಕ ಕರೆಯೋರು ಯಾರೂ ದಿಕ್ಕಿಲ್ಲ. ಏನಾದರೂ ಇದ್ರ ಒಂದಷ್ಟು ಕೊಡಿ ಎಂದಿತು. ಅಲ್ಲಿಂದ ಕಾಳಣ್ಣನ ಹೆಂಡ್ತಿ ಬಂದು ಕರಗುತ್ತಿದ್ದ ಕಡಲೆಕಾಯಿ ಗುಡ್ಡದಿಂದ ಸೆರಗ್ಗೆ ನಾಕು ಬೊಗಸೆ ಹಾಕೊಂಡು ಎದ್ದಳು. ಸಾಕವ್ವ ಕೈಸನ್ನೆ ಮಾಡಿ ಸೊಸೆ ಕರೆದು ಅವಳ ಮಳ್ಳಿಂದ ಒಂದು ಬೊಗಸೆ ತೆಗೆದು ಗುಡ್ಡಕ್ಕಾಕಿದಳು. ಅಮೇಲೆ ಕಾಳಣ್ಣನ ಹೆಡ್ತಿ ಬಿರಬಿರನೆ ಹೊರನಡೆದು ಬಿರಿಸೆರಗಲ್ಲಿ ಒಳ ಬಂದಳು"[೮] ಇಲ್ಲಿ ದಲಿತರ ಅಧೀನ ಬದುಕಿನ ಚಿತ್ರಣದ ಜೊತೆಗೆ ಸಾಕವ್ವನ ಯಜಮಾನಿಕೆ ವ್ಯಕ್ತವಾಗಿದೆ.

ಕಡಲೆಕಾಯಿ ಕದ್ದ ವಿಚಾರವಾಗಿ ಪೋಲಿಸು ರೇವಣ್ಣ ಮತ್ತು ಇನ್ಸೆಪೆಕ್ಟರ್ ಸಮೇತ ಸಾಕವ್ವನ ಮನೆ ಜಾಲಾಡುವಾಗ ಸಾಕವ್ವನ ಜನ್ಮನೇ ಜಾಲಾಡಿದಂತೆ ಆಗುತ್ತದೆ. ಅಲ್ಲಿ" ಮಚ್ಚಳದ ಬಿದುರು ಪುಟ್ಟೀಲಿ ಒಂದೆರಡು ಲಂಗ, ಸೀರೆ, ರವುಕೆ, ಶಿವೂನ ಅಂಗಿ ಚಡ್ಡಿ ಮಡಿಸಿಡಲಾಗಿತ್ತು, ಗೋಡೆಗೆ ಕೂಡಿಸಿದ್ದ ಬೊಂಬಿನ ಪುಟ್ಟಲೀ ಸೇರು ಪಾವು ಇದ್ವು, ಬೊಂಬಿನ ಮೇಲೆ ದುಪ್ಪಿ, ಹರಿದ ಹಳೆ ಸೀರೆ ಮತ್ತು ಹೊಸ ಚೀಟಿ ಸೀರೆ ಹಾಗೂ ಪಂಚೆ ಚೊಗ ಮುಂತಾಗಿದ್ದವು. ಮೇಲಿಂದ ಹಗ್ಗ ಇಳಿಬಿಟ್ಟ ನೆಲುವಿನ ಮೇಲೆ ಎಣ್ಣೆ ಇಲ್ಲದ ಎಣ್ಣೆ ಗಡುಗೆ, ತುಪ್ಪ ಇಲ್ಲದ ತುಪ್ಪದ ಗಡುಗೆ ಒಂದರ ಮೇಲೊಂದು ತೂಕಡಿಸುತ್ತಿದ್ದವು..........."[೯] ಹೀಗೆ ಈ ಮನೆಯು ಸ್ವರೂಪ ಇಡೀ ದಲಿತರ ಮನೆಯ ರೂಪವೇ ಆಗಿರುವುದನ್ನು ಗಮನಿಸಬಹುದು. ಹೀಗೆ ಇದ್ದುದನ್ನು ಇದ್ದ ಹಾಗೆ ಚಿತ್ರಿಸಿ ದಲಿತರೇ ನಿಮ್ಮ ಬದುಕು ಹೀಗಿದೆ ಎಂದು ಹೇಳವಲ್ಲಿ ಮೇಲ್ನೋಟಕ್ಕೆ ಯಾವುದೇ ಪ್ರತಿಭಟನೆ ವ್ಯಕ್ತವಾಗದಿದ್ದರೂ ಅಂತರಾಳದಲ್ಲಿ ತೀವ್ರ ಸ್ವರೂಪದ ವೇದನೆ ಅಸಹಾಯಕತೆಯ ಜೊತೆಗೆ ಅಗಾಧ ಸೌಮ್ಯ ಸ್ವರೂಪದ ಪ್ರತಿಭಟನೆ ವ್ಯಕ್ತವಾಗಿದೆ.

ಕೊನೆಗೆ ವಿಚಾರಣೆಯಾಗಿ ಯಾವ ಸುಳಿವ ಸಿಗದಿದ್ದಾಗ ಪೋಲಿಸರ ಸಮೇತ ಹೊರಟ ಇನ್ಸ್‌ಪೆಕ್ಟರ್ ಸಾಕವ್ವನ ಕೋಳಿ ಕಳುವಾದುದರ ಬಗ್ಗೆ ಮಾಡುವ ಜೋಕು ನಮ್ಮ "ಪೋಲೀಸ್ ಸಂಸ್ಕೃತಿಯ ಪರಿಚಯ ಮಾಡಿಕೊಟ್ಟರೆ, ಕೊನೆಯಲ್ಲಿ ಸಾಹುಕಾರರು ಸಾಕವ್ವನಿಗೆ ನೀಡುವ ಒಂದು ರೂಪಾಯಿ ಭಕ್ಷೀಸು ಶೋಷಣೆಯನ್ನು ನಯವಾಗಿ ಮರೆಸಲು ಪ್ರಯತ್ನಿಸುವ ಕುತಂತ್ರಗಳಿಗೆ ಹಿಡಿದ ಕನ್ನಡಿಯಾಗುತ್ತದೆ. ಇದು ಕತೆಯ ಹಂದರ

---

೭. ದೇವನೂರು ಮಹಾದೇವ : ಒಡಲಾಳ, ನವ್ಯಾಲೆ ಪ್ರಕಾಶನ, ಕುವೆಂಪುನಗರ, ಮೈಸೂರು ೨೦೦೩, ಪುಟ - ೨೪

೮. ಅದೇ ಪುಟ - ೨೫

೯. ಅದೇ ಪುಟ - ೪೪

ಎನ್ನಬಹುದಾದರೂ ಕತೆಯು ಒಳಗೆ ದೇವನೂರರು ಕಟ್ಟಿಕೊಡುವ ಚಿಕ್ಕ ಚಿಕ್ಕ ಚಿತ್ರಗಳೇ ಹೆಚ್ಚು ಪರಿಣಾಮಕಾರಿಯಾಗುತ್ತವೆ."[೧೦] ಆದ್ದರಿಂದಲೇ ಒಡಲಾಳದ ಕತೆ ಎನಿಸದೆ ದಲಿತ ಜೀವನದ ಕೆಲಭಾಗಗಳನ್ನು ಯಥಾವತ್ತಾಗಿ ನಮ್ಮೆದುರಿಗಿಟ್ಟ ಅನುಭವವಾಗುತ್ತದೆ.

ಮಹದೇವ ಅವರ ಎರಡನೇ ಕಾದಂಬರಿ 'ಕುಸುಮ ಬಾಲೆ'. ಒಡಲಾಳ ಒಂದು ಕುಟುಂಬದ ಕಥೆಯಾದರೆ ಕುಸುಮ ಬಾಲೆ ಒಂದು ಊರಿನ ಕಥೆಯಂತಿದೆ. ಇಲ್ಲಿ ದಲಿತ ವರ್ಗದ ಬದುಕಿನ ಜೊತೆಗೆ ಮೇಲ್ವರ್ಗದ ಯಾಡ ಮತ್ತು ಆತನ ತಾಯಿ ಅಕ್ಕಮಹದೇವಮ್ಮನ ಜೀವನ ಚಿತ್ರಣವಿದೆ. ಲೇಖಕರು ಆರಂಭದಲ್ಲಿಯೇ ಕಾದಂಬರಿಯ ಸಾರಾಂಶವನ್ನು ನೀಡಿದ್ದಾರೆ. "ಅಕ್ಕ ಮಹದೇವಮ್ಮನು ಗಂಡನ ತಿಥಿಯಾದ ಮಾರನೇಗೇ ತನ್ನ ತೌರಿಗೆ ಹೋದವಳು ಆರು ವರುಷದ ಬಳಿಕ, ಅಪ್ಪ ಸತ್ತ ಹನ್ನೇಡು ತಿಂಗಳಿಗೆ ಹಟ್ಟಿ ಜೊತೆಗಾರನಿಗೆ ಹುಟ್ಟಿದನೆಂಬ ಅಪವಾದದ ತನ್ನ ಕುಡಿಯಾಡನೊಡನೆ ಗಂಡನ ಮನೆಗೆ ಪಾಲಿಗಾಗಿ ಬರುವಳು. ಆಗ ಬಾವ ಬಸಪ್ಪಸೋಮಿ ಮೈದುನ ಸಿದ್ದೂರರು ಕುಪಿತರಾಗಿ ಅವಳನ್ನು ಗೋಮಾಳದಲ್ಲಿ ಬಿಸುಡುವರು. ಬಿಸುಟಲ್ಲೆ ನೆಲೆಯಾದ ಅಕ್ಕ ಮಹಾದೇವಮ್ಮನ ಸುತ್ತ ಬಂದು ಚೋಪಡಿ ಎದ್ದು ಯಾಡ ಬೆಳೆದಂತೆ ಅವನ ಸಾಮರ್ಥ್ಯವೂ ಸೇರಿ ಚೋಪಡಿ ಒಂದು ದೊಡ್ಡಮನೆಯಾಗಿ ಕಾಲಾನುಕ್ರಮದಲ್ಲಿ ಬಸಪ್ಪಸೋಮಿ ಸಿದ್ದೂರರ ಹಟ್ಟಿಯೇ ಕೊಟ್ಟಿಗೆಯಾಗುವುದು. ಈ ಯಾಡೇ ಗೌಡನ ಮಗ ಸೋಮಪ್ಪ ಊರಿಗೆ ದೊಡ್ಡವರು. ಇವರ ಮಗಳು ಕುಸುಮ ಬಾಳೆ, ಮತ್ತು ಹೊಲಾರ ಚನ್ನರ ನಡುವಿನ ಗುಪ್ತ ಸಂಬಂಧವು ಕುಸುಮಳಿಗಾದ ಮಗುವಿನಿಂದಾಗಿ ಬಯಲಾಗಿ ಅರಿವಾಗದೋಪಾದಿಯಲಿ ಚನ್ನನ ಕೊಲೆಯಾಗುವುದು. ಇತ್ತ ಇಡೀ ಊರಿಗೆ ಊರೇ ಕಿಚ್ಚು ಹಾಯಿಸೂ ಹಬ್ಬಕ್ಕೆ ಸಿದ್ಧವಾಗುತ್ತಿದ್ದರೆ, ಚೆನ್ನನ ಬಳಗಕ್ಕೆ ಸೇರಿದ ಕೆಂಪಿಗೆ ಹುಟ್ಟಿದ್ದ ಕಂದನನ್ನು ಬದುಕಿಸಲು ತಾಯಿ ತೂರಮ್ಮ ವಿಧಿಯೊಡನೆ ಸೆಣಸುತ್ತ, ಅಲ್ಲೆ ತೂರಮ್ಮನ ಅಕ್ಕನ ಮಗಳು ಈರಿಯು ತನ್ನ ಸವೆಯುತ್ತಿದ್ದ ಕಂದನನ್ನು ಉಳಿಸಿಕೊಳ್ಳಲು ವಿಫಲಳಾಗಿ ಹಾಗೂ ಚೆನ್ನನ ಕೊಲೆ ಅರಿಯದ ಬಳಗವು ಕಾಯುವುದು ಚೆನ್ನನ ಬರವಿಗಾಗಿ."[೧೧]

ಈ ಕಾದಂಬರಿಯ ಸಾರಾಂಶ ನೀಡಿರುವ ಉದ್ದೇಶ ಕಾದಂಬರಿ ಕಥೆ ಭೂತ ವರ್ತಮಾನ, ಭವಿಷ್ಯತ್ ಕಾಲಗಳ ಸಂಕೋಲೆಯಲ್ಲಿ ನಡೆಯುವವುದರಿಂದ ಓದುಗನಿಗಾಗುವ ಗೊಂದಲ ನಿವಾರಿಸುವ ಸಲುವಾಗಿ ಕಾದಂಬರಿಯಲ್ಲಿ ಮೊದಲು ಕಾಣಸಿಕೊಳ್ಳುವ ಪಾತ್ರಗಳು 'ಜ್ಯೋತಮ್ಮಗಳು', ರಾತ್ರಿ ೧೨ ಗಂಟೆ ನಂತರ ಎಲ್ಲರ ಮನೆಯ ಜೋತಿ ಆರಿಸಿದಾಗ ಅವುಗಳು ಬಂದು ಊರ ಮುಂದಲು ಜೊತೆ ಗೂಡಿ ಮಾತನಾಡುವ ರೀತಿ ಓದುಗರ ಮೈನವಿರೇಳುವಂತಿದೆ. ಎಲ್ಲಾ ಜಾತಿಯ ಮನೆಯರ ಜೋತಮ್ಮದಿರು ತಮ್ಮ ತಮ್ಮ ಮನೆಯಲ್ಲಿನ ಕಥೆಗಳನ್ನು ವಿನಿಮಯ ಮಾಡಿಕೊಳ್ಳುವಾಗ ದೊಡ್ಡೋರ ಹಟ್ಟಿ ಜೋತಮ್ಮನ್ನು ಕುರಿತು ಕುಸುಮಳ ವಿಚಾರಿಸಿದಾಗ ಆ ಜೋತಮ್ಮ "ಆಕೂಸ್ಯಾನ ಆರೋಗ್ಯವಾಗಿ ಆಡ್ಕಂಡದ ಆದ್ರ .......... ತಾಯಿ, ಅಯ್ಯೋ ನಮ್ಮ ಕುಸುಮ್ನಂತ್ತು ಈ ಏಡ್ ನೇತ್ರಗಳಿಂದ ನೋಡಕ್ಯಾಗಲ್ಲಕನವ್ವ", ಎಂದು ಹೇಳಿ ಅವಳು ಹಿಂದೆ ಇದ್ದುದನ್ನು ವರ್ಣಿಸತ್ತಾ.................

---

೧೦. ಅರವಿಂದ ಮಾಲಗತ್ತಿ : ದಲಿತ ಮಾರ್ಗ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೨, ಪುಟ - ೩೫೭

೧೧. ದೇವನೂರು ಮಹಾದೇವ : ಕುಸುಮಬಾಳೆ, ಪುಸ್ತಕ ಪ್ರಕಾಶನ, ಕುವೆಂಪುನಗರ, ಮೈಸೂರು ೨೦೦೩, ಪುಟ - ೦೧

"ಆ ಎಳೆ ನಗುನುವಿ ಈ ಎಳೆ ಚಲೂವ್ನವಿ ಸೇರ್ಸಿ ಬಟ್ಟೆ ಇಳ್ಸಿಮಾಡ್ದಂಗಿದ್ದವಳು......

ಸಿವ ಸಿವಾ ಅವಳು ನಕ್ಕರೋ ಅವಳ ಹಲ್ಲಿನ ಮ್ಯಾಗಲ ಆ

ಒಂಚುಟ್ಟೆ ಸಿಂಗಲ್ಲಿನಲ್ಲೆ ಈ ಲೋಕದ ಚಲೂನೆಲ್ಲ ಆ ಭಗವಂತ್ನು ಇಟ್ನೊ..........

ಆ ರತಿ ಅಂಬವಳ್ಗಿಯಾ ಅದ್ನೀಗ ಹೆಂಗಾರೊ ಮಾಡಿ ಕಿತ್ಕಂಡು ತನ್ನ

ಹಲ್ಲ್‌ನ ಮ್ಯಾಕ್ಕೆ ಇಟ್ಕಗಬೇಕೊ ಅನ್ನಂಗ ಇದ್ದವಳೂ

ಈಗ ಆ ನನ್ನ ಕಂದನೊಳ್ಗ ಬಸ್ಕಂಡ್ರ ಒಂದು ಚಿಟಾಕು ರಗ್ತ ಇದ್ದುದೋ

..........ಇಲ್ವೋ..........ಅನ್ನಂಗವ್ಳೆ.........."[೧೨]

ಎನ್ನುವಲ್ಲಿ 'ಬಾಣಂತಿ ಕಸುಮ' ಹಾಗೂ 'ಯುವತಿ ಕುಸುಮ'ಳ ವರ್ಣನೆ ವಸ್ತು ನಿಷ್ಠವಾಗಿ ಮೂಡಿದೆ. ಕುಸುಮಳ ವರ್ಣನೆ ಈ ಭಾಗದಲ್ಲಿ ಬಿಟ್ಟು ಇನ್ನೆಲ್ಲಿಯೂ ಬರುವುದಿಲ್ಲ ಆಕೆ ಇಡೀ ಕಾದಂಬರಿಯಲ್ಲಿ ಮಾತನಾಡುವುದು ಒಂದೇ ಬಾರಿ ! ಇದು ಈ ಕಾದಂಬರಿಯ ವೈಶಿಷ್ಟ್ಯ.

ಈ ಜೋತಮ್ಮರ ಪ್ರಸಂಗ ತಂದುದ ಉದ್ದೇಶ "ಎಲ್ಲಾ ಮನೆಯ ಜೋತಿಗಳು ಮನೆಯನ್ನು ಬೆಳಗುತ್ತಿರುವಾಗ ಎಲ್ಲವನ್ನು ಗ್ರಹಿಸುತ್ತವೆ. ಎಲ್ಲಾ ಕೆಲಸಕ್ಕೂ ಬೆಳಕು (ಜೋತ್ಯಿ)" ಅನಿವಾರ್ಯ ಆದ್ದರಿಂದ ಅವುಗಳ ಬಾಯಲ್ಲೇ ಈ ವಿಚಾರ ಪ್ರಸ್ತಾಪ ಮಾಡಿಸಿರುವ ಲೇಖಕರ ಸೃಜನಶೀಲತೆಗೆ ಹಿಡಿದ ಕನ್ನಡಿಯಾಗಿದೆ. ಅದೇ ರೀತಿಯಾಗಿ ಇಲ್ಲಿ 'ಮಂಚವು' ಒಂದು ಪಾತ್ರವಾಗಿ ಕಾಣಿಸಿಕೊಂಡು ಅದು ಯಾಡೇ ಗೌಡನ ಪಾಲಾದ ರೀತಿಯನ್ನು ಹೇಳುವ ಭಾವವು ಸಹ ಹೊಸ ಪ್ರಯೋಗ.

ಈ ಕಾದಂಬರಿಯಲ್ಲಿ ಕಥೆಯುದ್ದಕ್ಕೂ ಗಂಡು ಹೆಣ್ಣಿನ ಸಂಬಂಧ ಜಾತಿ ಮತವನ್ನು ಮೀರಿ ಹೆಣೆದು ಕೊಂಡಿದೆ. "ಮನುಷ್ಯ ಮೇಲು ಕೀಳು ಎಂಬ ಭ್ರಮೆಯಲ್ಲಿ ಬದುಕುತ್ತಿರುತ್ತಾನೆ. ಆದರೆ ಯಾವ ವಂಶ ವೃಕ್ಷದ ಬೇರು ಎಲ್ಲಿದೆ ಎಂದು ಹೇಳಲು ಬಾರದು. ಯಾಡ ಅಪ್ಪ ಸತ್ತ ಹನ್ನೆಡು ತಂಗಳಿಗೆ ಹಟ್ಟಿ ಜೀತಗಾರನಿಗೆ ಹುಟ್ಟಿದವನು. ಹೊಲೆಯರ ಚೆನ್ನ ಮತ್ತು ಕುಸುಮರ ಸಂಬಂಧ, ತನ್ನ ಗಂಡನಿಂದ ಸಾಧ್ಯವಾಗದ್ದನ್ನು ಬೇರೆಯವರಿಂದ ಆಪೇಕ್ಷಿಸುವ ಕೆಂಪಿ, ಯಾರಿಗೋ ಹುಟ್ಟಿ ಆಸ್ಪತ್ರೆಯಲ್ಲಿ ಅನಾಥವಾಗಿ ಬಿಟ್ಟಿದ್ದ ಸೋಮೇಗೌಡ ಹೆಂಡತಿ ಮಲ್ಲಾಜಮ್ಮ, ಆಚಾರ್ಯರ ಭಗವತಿ ಮತ್ತು ಹೊಲೆಯರ ಅಮಾಸರ ಸಂಬಂಧ. ಹೀಗೆ ಇಲ್ಲಿ ಗಮಿಸಬೇಕಾದ ವಿಚಾರವೆಂದರೇ ಈ ಸಂಬಂಧಗಳ ಬಗೆಗೆ ಯಾರನ್ನೂ ಪಾಪ ಪ್ರಜ್ಞೆ ಕಾಡುವುದಿಲ್ಲ."[೧೩] ಇದು ಸಾಮಾನ್ಯ ಸಂಗತಿ ಎನ್ನುವುದನ್ನು ಜೋತಮ್ಮನು ಕಾದಂಬರಿಯ ಮೊದಲಿಗೆ "ಐ.........ಎಲ್ರೂ ಮಾಡೋಯಥಾರ್ಥನೆ ಹೇಳ್ತೆಳೆ. ಎನ್ ವಿಚಾರ್ವ ಅದು" ಎಂದು ಹೇಳುವಲ್ಲಿ ಅಪರಾಧ ಭಾವ ಕಂಡುಬಾರದಿರುವುದನ್ನು ಗಮನಿಸಬಹುದು.

ಕಾದಂಬರಿಯಲ್ಲಿ ಯಾಡನ ತಾಯಿ ಅಕ್ಕಮಹಾದೇವಮ್ಮ ತನ್ನ ಭಾವ ಬಸವ ಸೋಮಪ್ಪ ಮತ್ತು ಮೈದುನ ಸಿದ್ದೂರರಿಂದ ಬಹಿಸ್ಕೃತಳಾಗುವುದು ಮೇಲ್ವರ್ಗದ ಹೆಣ್ಣು ಕೂಡ ಶೋಷಣೆಗೆ ಒಳಗಾಗುವ ಚಿತ್ರಣ ನೀಡುತ್ತದೆ. ಜೊತೆಗೆ ಆಕೆ ಹಠಮಾರಿಯಾಗಿ ಆ ಊರಿನ ಗೋಮಾಳದಲ್ಲೆ ಜೋಪಡಿ ನಿರ್ಮಿಸಿ ಹೋಟೆಲ್ಲನ್ನು ಇಟ್ಟು ಸ್ವಾವಲಂಬಿಯಾಗಿ ಜೀವನ ನಡೆಸುವ ಕಥಾ ಭಾಗವನ್ನು ಅವಲೋಕಿಸಿದರೆ ಲೇಖಕರು ಸೂಕ್ಷ್ಮವಾಗಿ ಸ್ತ್ರೀ ಸ್ವಾತಂತ್ರ್ಯಕ್ಕೆ ಒಲವು ತೋರಿಸಿದ್ದಾರೆನೋ ಎನಿಸುತ್ತದೆ. ಹೀಗೆ ಮುಂದುವರೆದು ಅಕ್ಕ ಮಹಾದೇವಮ್ಮನು

೧೨. ದೇವನೂರು ಮಹಾದೇವ : ಕುಸುಮಬಾಳೆ, ಪುಸ್ತಕ ಪ್ರಕಾಶನ, ಕುವೆಂಪುನಗರ, ಮೈಸೂರು ೨೦೦೩, ಪುಟ - ೦೫

೧೩. ಅರವಿಂದ ಮಾಲಗತ್ತಿ : ಕಾದಂಬರಿಗಳ ವಿಮರ್ಶೆ, ಪ್ರಸಾರಂಗ, ಮೈಸೂರು ೨೦೦೦, ಪುಟ - ೫೮

ಹೋಟೆಲು ನಡೆಸುವಾಗ ಟೀಗೆ ಅಂತ ಬರೊ ಪೋಲಿ ಹುಡುಗರು "ಅಷ್ಟೆ ಯಾಡಾ, ನಿಮ್ಮವ್ವ ಕೊಟ್ಟಯುಡಾ ಎಂದಾಗ ತಿರುಗಾ ವಾಪ್ಸು ಕೊಡುದಾದ್ರ ಕೊಡ್ರೀನೀ"[೧೪] ಎಂದು ಹೇಳವಲ್ಲಿ ಯಾಡ, ಮೇಲ್ವರ್ಗಕ್ಕೆ ಸೇರಿದರೂ ಆತನ ಮುಗ್ಧತೆ ಎಷ್ಟಿತ್ತು ಎಂದು ತೋರುತ್ತದೆ. ಅದೇ ಯಾಡ ಮುಂದೆ ಉಪಾಯದಿಂದ ತಾನು ಮೇಯಿಸುತ್ತಿದ್ದ ದನ, ಕುರಿಯನ್ನೆಲ್ಲಾ ಸಂತೆಗೆ ಹೊಡೆದು ಕೊಂಡು ಹೋಗಿ ಮಾರುವ ಸಂದರ್ಭದಲ್ಲಿ ಚಾಣಾಕ್ಷತೆ ಮೆರೆಯುತ್ತಾನೆ. ಹಾಗೂ ರಾಜರ ಅರಮನೆಯ ಮಂಚವನ್ನು ಕೊಳ್ಳುವಾಗಲೂ ಅವನ ಸ್ವಭಾವ ಮತ್ತು ವೇಶ ಭೂಷಣವೇ ಅವನಿಗೆ ಸಹಾಯ ಮಾಡುತ್ತದೆ.

ಕಾದಂಬರಿಯಲ್ಲಿ ಸೊಗಸಾಗಿ ಮೂಡಿಬಂದಿರುವ, ನಮ್ಮನ್ನು ತೀವ್ರವಾಗಿ ಕಲಕುವ ಭಾಗಗಳು ಸಾವಿನೊಡನೆ ಸೆಣಸಾಟ, ಜೀವದ ಬಗೆಗಿನ ಅದಮ್ಯ ಆಕಾಂಕ್ಷೆ. "ದಿನಾ ಸವೆಯುತ ಸುಂಡು ಹೋಗಿದ್ದ ತನ್ನ ಕರಳು ಬಳ್ಳಿಯ ತನ್ನ ಹೊಟ್ಟಗ ಕಟ್ಗಂಡು ಅದ್ಕ ಅಂಬಲಿ ನೀರೆರೆದು ಚಿಗುರಿಸುವ ಯತ್ನವ ಮಾಡ್ತ..........ಅವಳ ಕರುಳ ಬಳ್ಳಿಯೋ ಮುಳೆ ಮಾತ್ರಕ್ಕೆ" ಇದು ಮಗನ ಚಿತ್ರವಾದರೆ ತಾಯಿ ಈರಿ ರಕ್ತ ಮಾಸಂಗಳಿಂದ ವಂಚಿತಳಾಗಿ ಬರಿಯ ಮೂಳೆಯ ಚೆಕ್ಕೆಯಂತಾಗಿದ್ದಳು. ಆ ಮೂಳೆಯನ್ನೇ ತೇದು ತೇದು ಕೂಡಿಸುತ್ತಿದ್ದಳು. ಮತ್ತೊಂದು ಕಡೆ "ಕೆಂಪಿಗೆ ಹುಟ್ಟಿದ ಫಲವು ಮೂರು ತಿಂಗಳಾದ ಮ್ಯಾಲ ಊರ್ಜಿತ ಆಗದಿರಲು ಕೊನೆಗೆ ಬಂದು ಮಾಂಸದ ಮುದ್ದೆಯನ್ನು ಹೆತ್ತಳು. ಅದನ್ನು ಹೇಗಾದರೂ ಮಾಡಿ ಬದುಕಿಸಿಕೊಳ್ಳಲೇಬೇಕೆಂದು ತೂಂರಮ್ಮ ಒಂದು ಆತೇಯನ್ನೇ ಹಿಡ್ದು ಅದುಮಿ ಅದರ ಶರೀರದಿಂದ ಜೀವ ತೆಗೆದು ಈ ಜೀವ್ಕೆ ಆ ಜೀವಕ ನಡಿ ಅಂತಂತ ಮೂರ್ಸಲ ಅನ್ತ ನಾಗಚಿತ್ರದಿಂದ ಮುಂದೇಟು ಸವರುತ್ತಾಳೆ"[೧೫] ವಂಶದ ಕುಡಿಯನ್ನು ಉಳಿಸಿಕೊಳ್ಳಲು ಇವರು ನಡೆಸುವ ಹೋರಾಟ ಮನಕುಲಕವಂಥದು. ಇಲ್ಲಿ ಜೀವನ ಮುಂದುವರೆಯಬೇಕೆಂಬ ಹಂಬಲ ವ್ಯಕ್ತವಾಗಿದೆ. ಕಾದಂಬರಿಯಲ್ಲಿ ಕಂಡು ಬರುವ ಎಳನೀರು ಕಳ್ಳತನದ ಭಾಗ ಮೇಲ್ವರ್ಗ ಹಾಗೂ ಕೆಳ ವರ್ಗಗಳ ನಡುವೆ ನಡೆಯುವ ಸಂಘರ್ಷದ ಪ್ರತೀಕವಾಗಿದೆ. ಹೊಲೆಯರ ಗಾರೆಸಿದ್ಧ ಗೌಡರ ತೋಟದ ಎಳನೀರು ಕದ್ದು ಕುಡಿಯಕ ಕಿತ್ತಕಂಡಿ ಎಂದು ವಾದಿಸಿದಾಗ ಅವನನ್ನು ಕಂಬಕ್ಕೆ ಹೊಡೆಯುವ ದೃಶ್ಯ ಹೀನಾಯವಾದುದು. ಅದು ಮೇಲ್ವರ್ಗದ ದೌರ್ಜನ್ಯವನ್ನು ತೋರಿಸುತ್ತದೆ.

ಕಾದಂಬರಿಯ ಉದ್ದಕ್ಕೂ ಮೇಲು ಹಾಗೂ ಕೆಳ ಜಾತಿಯ ಗಂಡು ಹೆಣ್ಣುಗಳ ಪರಸ್ಪರ ಲೈಂಗಿಕ ಸಂಬಂಧ ಸಮಾಜದ ನೈತಿಕತೆಯನ್ನು ಕಡೆಗಣಿಸಿ ಕೂಡಿಕೊಳ್ಳುತ್ತದೆ. ಹೊಲೆಯರನ್ನು ಯಾಕೆ ಊರಾಚೆ ಇಟ್ಟರು ಎಂಬುದಕ್ಕೆ ಕುರಿಯಯ್ಯ ದಲಿತ ಮುಖಂಡ ಕೃಷ್ಣಪ್ಪನವರಿಗೆ ಹೇಳುವ ಕಥೆ ಸೋಜಿಗವೆನಿಸುತ್ತದೆ.

"ಸಾವಿರಾರು ಋತುಮಾನಗಳ ಹಿಂದ್ಲ ನಡೆನುಡಿ
ನಿಮ್ಮ ಗೋತ್ರಾ ? ಗೋತ್ರಾ ? ಆಗ ನಂ ಜಾತಿ ಮೂಲದ ಬಡ್ಡೆತ್ತವು ಮಾಡ್ತಿದ್ದಕ್ಕೇಮಿ
ಯಾನ ಅಂತ ಗೊತ್ತಾಯ್ತಾ?

ಕೇಳೀ .............. ನಂ ಜಾತಿ ಮೂಲದ ಬಡ್ಡೆತ್ತವು ಕಾಯ್ಕಂಡಿದ್ದು ತಂಕಣ್ಣುಗ
ಬೇಕ್ ಬೇಕಾದ ಉತ್ತಮರ ಹೆಡ್ರೀರ ಹೊತ್ಕಂಡು ನಡ್ದು ಬುಡೋರು
ಎಲ್ಲಿಗ್ಯ ? ಬಟ್ಟದ ಕಿಬ್ರಿಗ ಆಯ್ತಾ ? ವಸಿ ದಿನಗಂಟ ಅಲ್ಲೇ ಇರಾರು.

---

೧೪. ದೇವನೂರು ಮಹಾದೇವ : ಕುಸುಮಬಾಳೆ, ಪುಸ್ತಕ ಪ್ರಕಾಶನ, ಕುವೆಂಪುನಗರ, ಮೈಸೂರು ೨೦೦೩, ಪುಟ - ೨೫

೧೫. ಅದೇ ಪುಟ - ೫೯

ಆಯ್ತಾ ಅಮ್ಯಾಕ ಕೇಳಿ, ಆ ಬಡ್ಡತ್ರವು ತಿರ್‍ಗ ತಂ ಊರ್‍ಗೆ ಬರೋವು
ಯಾನೇ ಆಗ್ಲಿ ಆಗ ಉತ್ರಮ ಜಾತಿ ಜನ ಬೆಳ್ಳಿಯವರಾಗಿದ್ರು ಕುಯ್ಯ ತಾಳ್ಕತ್ತ
ಇದ್ದರು. ಅದ್ಕಿಯ ಅವ್ರುಗ ಉತ್ರಮ ಜಾತಿ ಅಂತ ಹೆಸ್ರೂ ಬಂದು ನಿಂತಿರೋದು.
ಸುಮ್ನ ಬಂದದ ಅಂಡ್ಕಂಡಿದ್ಯರ ? ಕೇಳೀ, ಆ ಉತ್ರಮರು
ಬೆಟ್ಟದ ಕಿಬ್ರಿಯಿದ ಬಂದವರ್‍ಗ ಏನ್ ಎಂತಿದ್ರು ಅಂದ್ರ.....ನೋಡಯ್ಯ
ಆದ್ದು ಆಗೋಯ್ತು, ತಿರುಗ ಬರಲ್ಲ ಯಾನ ಆಯ್ತು, ಯಾನ ಹೊಯ್ತು,
ನೀವ್‌ಗಳು ಕುಟ್ಟು ಕಟ್ಟಳ ಮುರದ ತಪ್ಪುಗ ಈಗ ನೀವ್‌ಗಳ ಊರಾಚ್ಗೆ
ಇದ್ಕಂಡು ನಾವು ಹೆಳ್ದ ಕೆಲಸವ ಮಾಡ್ಕಂಡು........ಹೆಂಗೂ ಇದ್ಕಳ್ಳೀ.... ಅಂತ ಅನ್ನವರು.

ಈ ಬಡ್ಡತ್ರವ್ಕ ಬೇಕಾಗಿದ್ದೂ ಅದಿಯಾ ಆ ಉತ್ರಮರು ಕಾಲಲ್ಲಿ ತೋರ್‍ಸಿದ್ದೆ
ಕೈಯಲ್ಲಿ ಮಾಡ್ಕಳರು. ಇರಾರು............"೧೬

ಹೀಗಾದುದರಿಂದ ಹೊಲ ಮಾದಿಗರು ಕಂಡರೆ ಉತ್ತಮ ಜಾತಿಯವರ ರಕ್ತ ಕುದಿತಾದೆ, ಎಂದು ಹೇಳುವ ಕುರಿಯಯ್ಯ. ಈ ಕಲ್ಪನೆಯನ್ನು ಮಾಡಿರುವ ಲೇಖಕರ ಅಭಿಪ್ರಾಯ ಒಪ್ಪಲು ಆಗುವುದಿಲ್ಲ. ಇಲ್ಲಿ ಜಿಜ್ಞಾಸೆಯಿದೆ; ಇನ್ನೂ ಹೆಚ್ಚಿನ ಚರ್ಚೆಗೆ ಅವಕಾಶವಿದೆ.

ಇಲ್ಲಿನ ಮತ್ತೊಂದು ಮುಖ್ಯವಾದ ಘಟನೆಯೆಂದರೆ ಚನ್ನ - ಚೆನ್ನರಸನಾಗಿ ಬೊಂಬಾಯಿಯಲ್ಲಿ ಇದ್ದಾನೆಂದು ಊರೆಲ್ಲಾ ಮಾತಾಡುತ್ತಿದ್ದ ವಿಷಯ ಕುಸುಮಳಿಗೂ ತಿಳಿದು ಅವಳು ಮಾನಸಿಕ ಅಸ್ವಸ್ಥಳಾದಾಗ ಕೊಳ್ಳೇಗಾಲ, ಕೇರಳಾದಿಂದ ಮಾಟ ಯಂತ್ರಗಾರರ ಕರೆಸಿ ದೆವ್ವಹಿಡಿದಿದೆ ಎಂದು ಅವಳಿಗೆ ನಾನಾ ವಿಧವಾಗಿ ಹಿಂಸೆ ನೀಡುವುದು ಹಿಂದಿನ ಹಳ್ಳಿಯ ಕ್ರೌರ್ಯ ಮೌಢ್ಯತೆಯನ್ನು ಧ್ವನಿಸುತ್ತದೆ. ಕೊನೆಯಲ್ಲಿ ಚನ್ನನ ತಂದೆ - ತಾಯಿಯರ ನಡುವಿನ ಸಂಭಾಷಣೆಯಲ್ಲಿ ಮೂಡಿಬರುವ ಬೊಂಬಾಯಿಯ ವರ್ಣನೆಯಲ್ಲಿ ವ್ಯಂಗ್ಯ, ಮುಗ್ಧತೆ, ಅಸಹಾಯಕತೆ ಇದೆ. ಜೊತೆಗೆ ದಲಿತ ಸಂಘದ ಸಂಘಟಕರು ಊರಿಗೆ ಪ್ರವೇಶಿಸಿ ಜೀತ ಮುಕ್ತಿಗಾಗಿ ಪ್ರೇರೇಪಿಸುವಾಗ ಚನ್ನನ ತಂದೆಯನ್ನು ನೋಡಿ ಮೇಲ್ವರ್ಗದ ಜನರು ವ್ಯಂಗ್ಯದಿಂದ 'ಬನ್ನಿ ಬುದ್ಧಿ' ಎಂದು ಹೇಳವಲ್ಲಿ ಶೋಷಣೆಗೆ ಕಡಿವಾಣ ಹಾಕುವ ಪ್ರಯತ್ನದ ವಿಫಲತೆ ಕಾಣಲೆಂದು ಬಯಸುವ ವಿಕೃತ ಮನಸ್ಸುಗಳ ಕೈವಾಡವಿದೆ ಎಂದು ತಿಳಿಯಬಹುದು. ದಲಿತ ಸಂಘಟನೆ ದಲಿತ ಕೇರಿಗೆ ಪ್ರವೇಶಿಸುವುದು, ಇನ್ನಾದರೂ ದಲಿತರಿಗೆ ಸ್ವಾತಂತ್ರ್ಯ ಸಿಗಲಿ ಎನ್ನುವುದು ಹಾಗು ದಲಿತರ ಏಳಿಗೆಗೆ ನಾಂದಿ ಹಾಡುವುದರ ಆಶಯವಾಗಿದೆ. ದಲಿತ ಹೋರಾಟದ ಆಶಯದಲ್ಲೇ ಕೃತಿಯನ್ನು ಗ್ರಹಿಸುವುದಾದರೆ, ಚೆನ್ನ ಅಥವಾ ಅವನಂತಹವರು ಅಥವಾ ಅವರ ಬದುಕನ್ನು ಅರ್ಥ ಮಾಡಿಕೊಂಡು ಒಟ್ಟನಲ್ಲಿ ಅವರ ಪರವಾಗಿ ನಿಲ್ಲ ಬಲ್ಲವರನ್ನು ಮುಟ್ಟ ಬಯಸುವ 'ಕುಸುಮ ಬಾಲೆ' ದಲಿತ ಜಗತ್ತಿನ ಅಮೂಲ್ಯ ಸೃಷ್ಟಿಯಾಗಿದೆ.

ಕಾದಂಬರಿ ಪ್ರಕಾರದಂದಲೇ ಸಾಹಿತ್ಯ ಲೋಕಕ್ಕೆ ಪರಿಚಯವಾದ ಮುಳ್ಳೂರು ನಾಗರಾಜು ಅವರು ಶ್ರೇಷ್ಠ ದಲಿತ ಸಾಹಿತಿಗಳಲ್ಲಿ ಒಬ್ಬರು. ಇವರ 'ಮರಣ ಮಂಡಲ ಮಧ್ಯದೊಳಗೆ' ಕಾದಂಬರಿ ಕನ್ನಡ ದಲಿತ ಕಾದಂಬರಿಗಳಲ್ಲಿ ಪ್ರಮುಖವಾದುದು. ಮುಳ್ಳೂರರೇ ಹೇಳಿ ಕೊಂಡಿರುವಂತೆ ಕಾದಂಬರಿಯ ವಸ್ತು, "ಅನೇಕ

---

೧೬. ದೇವನೂರು ಮಹಾದೇವ : ಕುಸುಮಬಾಲೆ, ಪುಸ್ತಕ ಪ್ರಕಾಶನ, ಕುವೆಂಪುನಗರ, ಮೈಸೂರು ೨೦೦೩, ಪುಟ - ೭೦

ಕಾಲಗಳ ಮಾನವ ಬದುಕು. ಅದೂ ಕೂಡ ಭೂಮಿಯ ಮೇಲಿನ ಮರಣದ ಸೆರಮನೆಯಾದ ಬದುಕಿನ ಕೇವಲ ಒಂದು ಕ್ಷಣ". ಈ ಹನ್ನೆಲೆಯಲ್ಲಿ ಕಾದಂಬರಿ ಭೂತ, ವರ್ತಮಾನ, ಮತ್ತು ಭವಿಷ್ಯತ್‌ಗಳ ಸಮೀಕರಣದೊಂದಿಗೆ ಜೀವಿತವಾಗುತ್ತದೆ. 'ಕಾಡೂರು' ಕಾದಂಬರಿಕಾರರ ಕಲ್ಪನೆಯ ಒಂದು ಊರಿನ ಹೆಸರಾದರೂ ಭಾರತದ ಯಾವುದೇ ಹಳ್ಳಿಯ ದರ್ಶನಕ್ಕೂ ಸಂಕೇತವಾಗಿದೆ. ಅದು ಯಾವ ನಾಗರೀಕತೆಯ ಸೋಂಕು ಇಲ್ಲದ ಹಳ್ಳಿ ಆ ಹೆಸರೇ ಮನುಷ್ಯನ ಕಾಡಿನ ಬದುಕನ್ನು, ಸ್ವಾತಂತ್ರ್ಯದ ನಂತರದ ದಾರಿದ್ರ್ಯವನ್ನೂ ಪ್ರತಿಬಂಬಿಸುತ್ತದೆ.

ಕಾದಂಬರಿಯ ಮೊದಲ ಭಾಗದಲ್ಲಿ ಒಂದ ಜನಪಧಿಯ ಕಥೆಯ ಮೂಲಕ ಇಡೀ ದಲಿತ ಬದಕಿನ ಬವಣೆಯ ಹಲವು ಮಜಲುಗಳ ಸ್ವರೂಪವನ್ನು ಚಿತ್ರಿಸಿರುವುದು ಗಮನಾರ್ಹವಾಗಿದೆ. ಅರಸು ಕುಲದ 'ಮಾಳುಗಮ್ಮಳ' ತಮ್ಮ ಈರಣ್ಣ ಸೌದೆ, ಬೆರಣಿ, ತರಲು ಕಾಡಿಗೆ ಹೋಗಿ ತೋರರ ಹೆಣ್ಣುಗಳ ಸಂಗದಿಂದ ತನ್ನ ಕಾರ್ಯ ಮರೆತು ಕುಳಿತು ಬಿಟ್ಟಾಗ ಮಾಳುಗಮ್ಮಳ ಗೆಳತಿ 'ರಾಕಾಸಿಯು' ಮಾಳುಗಮ್ಮಳಿಗೆ ಈರಣ್ಣನ ವಿಚಾರವಾಗಿ ಬಣ್ಣ ಕಟ್ಟಿ ಹೇಳಲಾಗಿ ತಮ್ಮ ಈರಣ್ಣನಿಗೆ ಶಾಪ ಕೊಟ್ಟು ಮಾಳುಗಮ್ಮಳಿಂದ ಹೊಲಗೇರಿ ಸೃಷ್ಟಿಯಾಗಿ ಅಲ್ಲಿ ಆತ ಜೀವಿಸುತ್ತಾನೆ. ಈ ಕಲ್ಪನೆ ಇಂದಿನ ಜಾತಿ, ಅಸ್ಪೃಶ್ಯತೆಗಳಿಗೆ, ಆಚರಣೆಗಳಿಗೆ ಕೇವಲ ಐತಿಹ್ಯ ಮೂಲಗಳಾಗಿ ನಿಂತಿರುವುದು ಮತ್ತು ಇವುಗಳಿಗೆ ಐತಿಹಾಸಿಕವಾಗಿ ಯಾವ ಆಧಾರವೂ ಇಲ್ಲದಿರುವುದಕ್ಕೆ ಸಾಕ್ಷಿಯಾದಂತೆ ಅಂತಹ ಪರಿಕಲ್ಪನೆಯನ್ನು ವಿಮರ್ಶಿಸುವಂತೆ ಕಾಣುತ್ತದೆ."[೧೭] ಈ ಕಥೆಯಿಂದ ಜಾತಿ ವ್ಯವಸ್ಥೆಯೂ ಆಧಾರ ರಹಿತ ಎಂದು ಹೇಳುತ್ತಾರೆ. ಅಕ್ಕ ತಮ್ಮರ ಚಾರಿತ್ರ್ಯ ಶುದ್ದ ಮತ್ತು ಶಾಪವನ್ನು ಅವಲಂಭಿಸುತ್ತ, ಅಂಥ ಸೃಷ್ಟಿಗೆ ಒಂದು ಪ್ರಬಲವಾದ ನಂಬಿಕೆಯ ತಳಹದಿ ಸಿಕ್ಕಿರವುದನ್ನು ಕಾಣಬಹುದು. ಇಂಥ ಸಾಮಾಜಿಕ ಅಸಮಾನತೆ ಇರುವ ಸಂಬಂಧವೂ ಅಸಮಾನತೆಯ ದೃಷ್ಟಿ ಕೇವಲ ಜಾತಿಯ ಪ್ರಬಲತೆಯಿಂದ ಮಾಡಿದ್ದಾಗಿದೆ. ಮತ್ತು ಈ ಅಸಮಾನತೆಯೂ ಯಾವುದೋ ಒಂದು ನಿಷೇದಾತ್ಮಕ ಕಾರಣಕ್ಕಾಗಿ ಹುಟ್ಟಿದರೂ ಪರಿಹರಿಸಲಾಗರದಂತಹ ಸಂಬಂಧದ ಜೊತೆಗೆ ಹೆಣೆದು ಕೊಂಡಿದೆ. ಮುಂದೆ ಮಾಳುಗಮ್ಮ ಮತ್ತು ಕಾಸಿಯರಿಗೆ ಹೊಲೆಯರ ಸಂಗಯ್ಯ ಬೇಕಾಗುವುದು ಮೇಲಿನ ಹೊಲಿಗೇರಿ ಸೃಷ್ಟಿಯ ಎಲ್ಲಾ ಹಿನ್ನೆಲೆಗಳನ್ನು ಬುಡಮೇಲು ಮಾಡಿ ಸಮಾನತೆಯನ್ನು ಮೆರೆಯುವ ಅಂಶಗಳು ಕಂಡು ಬರುವುದು. ಹೊಲಾರ ಸಂಗಯ್ಯ ಅನಿವಾರ್ಯವಾದ ಜೀವಿ ಎಂಬಂತೆ ತೆಳಮಳಗೊಳ್ಳುವಾಗ ಅಲ್ಲವೆ ಸಂಗಯ್ಯನ ಹೆಸರಿನ ಸಂಗ ಪದದ ಅರ್ಥ ಮತ್ತು ನಿರಂತರತೆಗೆ

"ಭೂಮಿಯ ಮ್ಯಾಲ
ರಕುತದ ಹನಿಗಳ
ಬಿತ್ತನೆ ಮಾಡಿ
ಇಂದೂ ಇರುವನ ಸಂಗಯ್ಯ
ನಾಳ್ಗೂ ಬರುವನು ಸಂಗಯ್ಯ"[೧೮]

ಎಂಬ ವರ್ಣನೆ ಸಂಗಯ್ಯನನ್ನು ಸಾರ್ವಕಾಲಿಕ ಪಾತ್ರವನ್ನಾಗಿಸುವ ಪ್ರಯತ್ನವಾಗಿದೆ. ಬಲಿಯ ಪರಂಪರೆಯು ತನ್ನ ಅವತಾರಗೊಳ್ಳುವ ಜೀವಂತವಾಗಿರುವುದಕ್ಕೊ ಜಾನಪದೀಯ ಹಿನ್ನೆಲಯನ್ನಿಟ್ಟುಕೊಂಡೇ ಸತ್ಯೀಕರಿಸುವ ಅಂಶ ಸಾಮಾಜಿಕ ಕೀಳು ಭಾವನೆಯ ಮತ್ತೊಂದು ರೂಪವಾಗಿ ಪರಿಣಮಿಸಿದೆ.

---

೧೭. ಬರಗೂರು ರಾಮಚಂದ್ರಪ್ಪ : ಸಾಹಿತ್ಯ ವಿಮರ್ಶೆ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು ೧೯೯೧, ಪುಟ - ೧೭೪
೧೮. ಮುಳ್ಳೂರು ನಾಗರಾಜ : ಮರಣ ಮಂಡಳ ಮಧ್ಯದೊಳಗೆ, ಕನ್ನಡ ಸಂಸ್ಕೃತಿ ಇಲಾಖೆ, ೧೯೯೨, ಪುಟ - ೧೬

"ಆ ರಕುತದ ಬಿಂದುಗಳಲ್ಲಿ
ಗಾಂಧಿ ಬಿಂಬವು ಅರುಳಿತಲ್ಲಾ
ಆ ರಕುತದ ಬಿಂದುಗಳಲಿ
ಅಂಬೇಡ್ಕರರ ಬಿಂಬವು ಉರಿಯುತಲ್ಲಾ"[೧೯]

ಗಾಂಧಿಯು 'ಅರಳುವಿಕೆ,' ಅಂಬೇಡ್ಕರರ 'ಉರಿಯುವಿಕೆ' ಕ್ರಿಯೆಯ ವ್ಯತ್ಯಾಸವನ್ನು ಭಾವದ ವ್ಯತ್ಯಾಸವನ್ನು ದೃಷ್ಟಿಕೋನದ ವ್ಯತ್ಯಾಸವನ್ನು ತಿಳಿಸುತ್ತದೆ. ದಲಿತರ ಜನ ಜೀವನವನ್ನು ಬಳಸಿಕೊಂಡ ಗಾಂಧಿ ಕೇವಲ ಅರಳಿ ಪ್ರಸಿದ್ಧರಾದರು. ಒಂದು ಮುಖದ ಜನ ಪ್ರಿಯತೆಗಾಗಿಯೇ, ಅಂಥ ರಕ್ತ ಬಿಂದುಗಳಲ್ಲಿ ಮಿಂದದ್ದು ಗಾಂಧಿಯ ಒಟ್ಟು ಬದುಕು ದಲಿತರ ಒಟ್ಟು ಬದುಕಿಗೆ ಮಾಡಿದ ಉಪಕಾರವನ್ನು ನಂತರದ ಪರಿಣಾಮವನ್ನು ಹೇಳುತ್ತದೆ. ಹಾಗೆಯೇ ಅಂಬೇಡ್ಕರರ ಬದಕು ದಲಿತ ಬದುಕನ್ನು ಅರಿಯುವುದರ ಜೊತೆಯಲ್ಲಿ ನೀಡಿದ ಕೊಡುಗೆಯನ್ನು ಹೇಳುತ್ತದೆ.

ಅರಸಪ್ಪನ ಬರಗಾಲದ ಆಳ್ವಿಕೆ ಆತನ ಸ್ವಾರ್ಥ, ಬಡವರ ಗೋಳು ಕೇಳದ ಅವನ ಕಿವುಡು ದರ್ಬಾರ ಇವುಗಳ ವಿರುದ್ಧ ಭೂಪಯ್ಯ ಅರಸಪ್ಪನನ್ನು ಕೊಂದು ಅಧಿಕಾರಕ್ಕೆ ಬರುವುದು ಸೃಷ್ಟಿ ವ್ಯವಸ್ಥೆಯ ರೂಪವೇ ಆಗಿದೆ. ಇದು ಸಧ್ಯದ ರಾಜಕೀಯ ಅರಾಜಕತೆಗೆ ಮತ್ತು ಭ್ರಷ್ಟತೆಗೆ ಹಿಡಿದ ಕನ್ನಡಿಯಂತಿದೆ.

"ಆ ಮರಿ ನಾಗರುಗಳು ಈ ಪಾಪಿಷ್ಠವಾದ ನರಲೋಕ
ಬಂದು ದಿಕ್ಕಪ್ಪವೆ, ನೀನಾದರೂ ಅವಕೆ ಮನವ ನೋಯಿಸಬೇಡ
ಆ ಮರಿನಾಗರುಗಳುವ ಮಾನವ ಮಿದುಳು ಅಂದ್ರ, ಬಲು
ಇಷ್ಟ ಆ ಇಸ್ಟವ ಸಲ್ಸುದ್ರ ಅವು ನಿನ್ನ ಭುಜದ ಮಾಂಸ ತಿನ್ನಲ್ಲ"[೨೦]

ಎಂಬ ಚಿತ್ರ ಶೋಷಣೆಯ ಮತ್ತೊಂದು ಮುಖವಾಗಿದೆ. ಇದು ಸ್ವಾರ್ಥ ಸಾಧನೆಂಬ ಸ್ಪಷ್ಟಚಿತ್ರವಾಗಿದೆ.

ಭೂಪಾಲ ದೊರಗೆ ಒಪ್ಪಿಸಬೇಕಾದ ಮಿದುಳು ಇಡೀ ಕಾದಂಬರಿಯ ಬಹು ಸೂಕ್ಷ್ಮವಾದ ಹೃದಯವಿದ್ದಂತೆ. "ಸಧ್ಯದ ಭಾರತದ ಪ್ರಜಾ ಪ್ರಭುತ್ವದ ವ್ಯವಸ್ಥೆಯನ್ನು ತನ್ಮೂಲಕ ಸಮರ್ಪಕವಾಗಿ ವ್ಯಂಗ್ಯ ಮಾಡುವಂತೆ ಕಂಡರೂ, ಬದಲಿಗೆ ಪ್ರಶ್ನಿಸುವ ಪ್ರಜ್ಞೆಯೇ ಮುಖ್ಯವಾದುದೆನಿಸುತ್ತದೆ. ರಾಜಕೀಯ ಅರಾಜಕತೆ ಬರಗಾಲದ ಭೀಕರತೆಯೊಂದಿಗೆ ಸೇರಿ ಇಡೀ ಜನ ಸಾಮಾನ್ಯರನ್ನೂ ತಿನ್ನುತ್ತಿರುವ ಕಾಲಕ್ಕೆ ಪ್ರಜಾಸತ್ತಾತ್ಮಕವಾದ ಕೊಲೆಗಳ ಮುಖಾಂತರ ಯಾವ ಬೇಡಿಕೆಗಳನ್ನು ರಾಜನ ಮುಂದಿಡದಂತೆ ಮಾಡುವ ಸಾಮಾನ್ಯ ಜನ ವಿರೋಧಿ ನೀತಿ ಮೂಲಕ ಸಧ್ಯದ ಬದುಕಿನ ಸತ್ಯ ದುರಂತಗಳನ್ನು ಕಾದಂಬರಿಕಾರ ಅರ್ಥ ಪೂರ್ಣ ರೀತಿಯಲ್ಲಿ ಪ್ರಶ್ನಿಸುತ್ತಿರವುದು ಪ್ರಜಾಪ್ರಭುತ್ವದ ಪರವಾಗಿಯೇ ಮಾತನಾಡುತ್ತಿದ್ದರೂ ಅಂತರ್ಯದಲ್ಲೆಲ್ಲೋ ಇನ್ನೊಂದು ಮುಖವನ್ನು ವಿಮರ್ಶಿಸಿಕೊಳ್ಳುವಂತೆ ಓದುಗರಿಗೆ ಬಿಡುವುದು ಗಮನಾರ್ಹ."[೨೧] ಕಾಡೂರು ಮರಣ ಮಂಡಲವಾಗಿ ಚಿಗುರೊಡೆದಾಗ, ಕವಿ, ಕಲಾವಿದರು, ರಾಜ ಕಡೆಯ ಸೂಳರು ಉಂಡು ಕುಣುದು ತೇಗುವುದು, ಇದಕ್ಕೆ ವಿರುದ್ಧವಾಗಿ ಬಡಜನರು ಉರಿದು ಹೋಗುವುದು ಕಾದಂಬರಿಯನ್ನು ಅರ್ಥ ಪೂರ್ಣತೆಯ ಕಡೆ ಕರೆದೊಯ್ಯುವ ಸ್ಥಿತಿಯಾಗಿದೆ. ರಾಜಕೀಯ

---

೧೯. ಮುಳ್ಳೂರು ನಾಗರಾಜ : ಮರಣ ಮಂಡಳ ಮಧ್ಯದೊಳಗೆ, ಕನ್ನಡ ಸಂಸ್ಕೃತಿ ಇಲಾಖೆ, ೧೯೯೨, ಪುಟ - ೨೫
೨೦. ಅದೇ ಪುಟ - ೯೬
೨೧. ಬರಗೂರು ರಾಮಚಂದ್ರಪ್ಪ : ಸಾಹಿತ್ಯ ವಿಮರ್ಶೆ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು ೧೯೯೧, ಪುಟ - ೧೭೭

ಭ್ರಷ್ಟತೆ ತಾನು ಮಾಡಬಹುದಾದ ಕಾರ್ಯದಿಂದ ತಪ್ಪಿಸಿಕೊಂಡು ತಾನು ಮಾತ್ರ ಬಿಸಾರಾಮವಾಗಿ ಬದುಕುತ್ತಾ, ಸಾಮಾನ್ಯನ ಬದುಕನ್ನು ಗುಂಡಿ ಕೊಚ್ಚೆಗಿಂತಲೂ ಕೀಳಾಗಿ ಕಾಣುತ್ತದೆಂಬುದಕ್ಕೆ ನಿದರ್ಶನವಾಗಿದೆ.

ಮಿದುಳನ್ನು ಕೀಳುತ್ತಾ ನಡೆದ ನಿರಂತರವಾದ ಶೋಷಣೆ ಮುಂದುವರೆಯುತ್ತದೆ. ಸುಧಾರಕ ಹಂತವನ್ನು ತಲುಪುವುದು ಕಾದಂಬರಿಯ ಘಟನೆಗಳ ಬೆಳವಣಿಗೆಯಲ್ಲಿ ಬಹು ಮುಖ್ಯವಾದುದಾಗಿದೆ. ಇಂಥ ಸುಧಾರಣೆಯ ಪ್ರತಿಭಟನೆಯೊಂದಿಗೆ ನಡೆಯುವುದು ಗಮನಾರ್ಹ ಅಂಶವಾಗಿದೆ.

ರಾಕ್ಕಾಸಿಯ ಮಗ ಸಿಂಗಾರು ಮಿದುಳು ಮಾನವೀರೋಧಿ ಎಂಬ ಅರಸನ ಧೋರಣೆಯನ್ನು ವಿರೋಧಿಸಿ

"ಮನುಷ್ಯನಿಗೆ ಮಿದುಳು ಇರುವುದು ಆರೋಗ್ಯಕರ
ಯಾಕಂದ್ರೆ ಮನುಷ್ಯನಿಗೆ ಮಿದುಳು ಇದ್ರೆ ಬಡವನಾದ್ರೂ
ರಾಜರಮನೇಲೂ ಊಟ ಮಾಡ್ಬಹುದು
ರಾಣಿಯ ಕೈಲೇ ಮಾಡ್ಬಹುದು"[೨೨]

ಎಂದು ಒಂದು ಹೊಸತನದ ಗಾಳಿಯನ್ನು ತಂದು ಜನರಿಗೆ ಮಿದುಳಿನ ಮಹತ್ವವನ್ನು ತಿಳಿಸಿಕೊಡುತ್ತಾನೆ. ಇದರಿಂದ ಜನರಲ್ಲಿ ಬದಲಾವಣೆ ಉಂಟಾಗುತ್ತದೆ. ನಂತರ ರಾಜನನ್ನು ಕೊಲೆಗೆಯ್ಯುವುದು ಕತ್ತಲ ಜಗತ್ತಿನಿಂದ ಬೆಳಕಿನೆಡೆಗೆ ಪಯಣ ಬೆಳೆಸುವ ಆಶ್ರಯದ ಜೊತೆಗೆ ವ್ಯವಸ್ಥೆಗಾಗಿ, ಹಿಂಸೆ ತೀರಾ ಅನಿವಾರ್ಯವೆನಿಸುವ ಅಂಶ ಸ್ಪಷ್ಟವಾಗುತ್ತದೆ. ರಾಜನ ವಿರುದ್ಧ ಬಂಡು ಹೂಡಿದ ಬಾಲಕನಿಗೂ ವ್ಯವಸ್ಥೆಯೊಂದಿಗೆ ಹೋರಾಡುವುದು ದುಸ್ಸರವಾಗುತ್ತದೆ. ನಂತರ ಅವನ ತಾಯಿ ರಾಜನನ್ನು ಕೊಂದು ಕತ್ತಲ ಆ ರಾಜ್ಯವನ್ನು ಬಿಟ್ಟು ಮಗನೊಂದಿಗೆ ಬಳಕಿನೆಡೆಗೆ ಹೋಗುತ್ತಾಳೆ. "ದಲಿತರಿಗೆ ಅವಶ್ಯವಾಗಿ ಬೇಕಾಗಿರುವುದು ಹೊಸಬರ ಅಕ್ಷರ ಜ್ಞಾನ. ಹಳಬರ ಬಲ ಅಂದರೆ ಆದರ್ಶ ಬೆಳವಣಿಗೆಗೆ ಮುಖ್ಯವಾಗಿ ಸಂಪ್ರದಾಯಗಳ ತಳಹದಿ ಬೇಕೆಂಬ ಹುಂಬತನವಲ್ಲ. ಅದು ದಿಢೀರನೆಯದ್ದೂ ಅಲ್ಲ ಎಂಬ ಅನುಮಾವಿದ್ದರೂ ಅವ್ಯವಸ್ಥೆಯ ನಿರಂತರ ಬೆಳವಣಿಯೊಂದಿಗೆ ಒಂದಲ್ಲ ಒಂದೂ ದಿನ ದುಷ್ಟ ರಾಜನನ್ನು ಅವನ ಪ್ರಭುತ್ವವನ್ನು ಇಲ್ಲದಂತೆ ಮಾಡಿ ಬೆಳಕಿನ ಸಾಮ್ರಾಜ್ಯಕ್ಕೆ ಬರಬಹುದೆಂಬುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಮರ್ಥಿಸುತ್ತಾ ಈ ಭಾಗದ ಕಥೆಯೂ ಮುಗಿಯುತ್ತದೆ"[೨೩]

ಪ್ರಸ್ತುತ ಭಾರತೀಯ ಸಂದರ್ಭಕ್ಕೆ ಈ ಕಥಾನಕವನ್ನು ಹೋಲಿಸಿದರೆ ಪ್ರಬಲ ಜಾತಿವ್ಯವಸ್ಥೆ ಹೊಂದಿರುವ ಈ ದೇಶದಲ್ಲಿ ನಡೆಯುವ ಅನೇಕ ಘಟನೆಗಳಿಗೆ ಸಾಕ್ಷಿಯಾಗಿದೆ. ರಾಜಕೀಯ ವ್ಯವಸ್ಥೆಯಲ್ಲಿ ನಡೆಯುವ ಒಬ್ಬರನ್ನು ಮೆಟ್ಟಿ ಇನ್ನೊಬ್ಬರು ಅಧಿಕಾರಕ್ಕೆ ಬರುವುದು ಹಿಂದೆಯೂ ಇತ್ತು, ಈಗಲೂ ಇದೆ. ಮುಂದೆಯೂ ಇರುತ್ತದೆ ಎಂಬುದು ಸೂರ್ಯ-ಚಂದ್ರ ಇರುವ ಕಾಲದವರೆಗೂ ಸತ್ಯ. ಜೊತೆಗೆ ಉಳ್ಳವರು ಇಲ್ಲದವರ ಮೇಲೆ ನಡೆಸುವ ಸೌರ್ಜನ್ಯ, ಕ್ರೌರ್ಯ, ದಬ್ಬಾಳಿಕೆಯನ್ನು ಮತ್ತು ಅದರಿಂದ ಹೊರಬರಲು ಸಿಂಗಾರವಿನಂತರ (ರಾಕಾಸಿಯ ಸಾಕುಮಗ) ಚಿಂತನೆಯನ್ನು ಉಳ್ಳವರು ಬರಬೇಕು. ಎಂಬುದನ್ನು ಈ ಕಾದಂಬರಿಯ ಮೊದಲ ಬಾಗ ತಿಳಿಸುತ್ತದೆ.

೨೨. ಮುಳ್ಳೂರು ನಾಗರಾಜ : ಮರಣ ಮಂಡಳ ಮಧ್ಯದೊಳಗೆ, ಕನ್ನಡ ಸಂಸ್ಕೃತಿ ಇಲಾಖೆ, ೧೯೯೨, ಪುಟ - ೬೧
೨೩. ಅರವಿಂದ ಮಾಲಗತ್ತಿ : ಕನ್ನಡ ವಿಮರ್ಶೆ, ಪ್ರಸಾರಂಗ, ಮೈಸೂರು ೨೦೦೦, ಪುಟ - ೭೭

ಮೊದಲ ಭಾಗದಲ್ಲಿ ಜನಪದೀಯ ಐತಿಹ್ಯದ ವಸ್ತುವನ್ನು ಆದರಿಸಿಟ್ಟರೆ ಅನಂತರದ ಭಾಗದಲ್ಲಿ ಆ ಐತಿಹ್ಯದ ಮುಂದುವರಿಕೆಯಾಗಿ ವಾಸ್ತವತೆಯನ್ನು ಎಣೆಯುತ್ತಾರೆ. ಇಲ್ಲಿಯ ನಾಯಕ ಬಸುರಾಜು ಈತ ದಲಿತರ ಪ್ರತಿನಿಧಿಯಾಗಿ ಕಂಡು ಬರುತ್ತಾನೆ. ದಲಿತರಿಗೆ ನಿಷ್ಠನಾಗಿ ಮೇಗಲ ಕೇರಿಯವರಿಗೆ ಸಿಂಹ ಸ್ವಪ್ನವಾಗಿರುವ ಬಸುರಾಜು ಒರಟುತನ, ವಿದ್ಯೆಯಿಲ್ಲದಿದ್ದರೂ ಪ್ರಜ್ಞೆ ಇರುವ, ಬಲದಿಂದಲೇ ಮೇಲ್ವರ್ಗವನ್ನು ನಿಗ್ರಹಿಸುವ, ಅವರನ್ನು ಪ್ರತಿಭಟಿಸುವ ಸಾಮರ್ಥ್ಯ ಹೊಂದಿದ್ದಾನೆ. ಈತನಿಗೆ ಸಮಾಜದಲ್ಲಿರುವ ಜಾತಿ ವ್ಯವಸ್ಥೆಯ ಬಗ್ಗೆ ಕೋಪವಿದೆ. ಇದರಿಂದ ಮೇಲ್ವರ್ಗದ ಹೋಟೆಲಿನಲ್ಲಿ ಟೀಯನ್ನು ಕೇಳುವ ಮೇಲ್ವರ್ಗದವರೊದಿಗೆ ಸಮನಾಗಿ ಕುಳಿತು ಕೊಳ್ಳುವ ನೈತಿಕ ಧೈರ್ಯವಿದೆ. ಆದರೆ ತನ್ನ ಜನಾಂಗದೊಳಗೆ ಉಂಟಾಗಿರುವ ಅನೇಕ ಸಮಸ್ಯೆಗಳಿಗೆ ಪರಿಹಾರ ಹುಡುಕುವಲ್ಲಿ ಸೋಲುತ್ತಾನೆ. ರಂಗ ಮತ್ತು ರಂಗಿಯರ ಪ್ರಕರಣ, ಕೆಂಚೆ ಮತ್ತು ಚಂದ್ರಪ್ಪ ಗೌಡರ ಸಂಬಂಧ, ದೇವರಸು ಬೇಗಂ ಅವರ ಪ್ರಕರಣಗಳು ಬಸುರಾಜು ಪಾತ್ರವನ್ನು ಬೆಳೆಸುವ ಮುಖ್ಯಘಟನೆಗಳಾದರೂ, ಈ ಘಟನೆಗಳು ಒಂದು ದೊಡ್ಡ ಸವಾಲೆಂಬಂತೆ ನಿಲ್ಲುತ್ತದೆ. ತಮ್ಮಲ್ಲಿರುವ ಮೌಢ್ಯತೆ ಮೇಲ್ವರ್ಗದವರ ಪ್ರಭಾವ, ಇವೆಲ್ಲ ಬಸುರಾಜುವಿನ ಕಾರ್ಯವನ್ನು ಹತ್ತಿಕ್ಕುತ್ತವೆ. ಇದರಿಂದಶನಿದೇವರ ಮೊರೆ ಹೋಗಿ ಅಲ್ಲೂ ನಿರಾಶನಾಗುತ್ತಾನೆ. ಇದು ಆತನ ಮುಗ್ಧತೆಯ ಸ್ಥಿತಿಯನ್ನು ತಿಳಿಸುತ್ತದೆ.

ಬಸುರಾಜು ತನ್ನ ಹೋರಾಟಗಳ ನಡುವೆ ಅಂಬೇಡ್ಕರ್ ಸಂಘ ಕಟ್ಟಲು ಪ್ರಯತ್ನಿಸುತ್ತಾನೆ. ಆ ಸಂದರ್ಭದಲ್ಲಿ 'ಅಬೇಂಡ್ಕರ್ ಸಂಘ' ಎಂಬ ಬೋರ್ಡಿನ ಕೆಳಗೆ ಚುಂಚನ ಹಳ್ಳಿಯಲ್ಲಿ ಜೋಜು ಕುಡಿತ ಇವುಗಳನ್ನು ನೋಡಿ

"ಈ ಸೂಳ ಮಳ್ಳು ಹೆಡ್ಡೀರ ಆ ಗೌಡ್ರ ಕೇರ್ರವು ಹಿಡ್ಕಂಡು ಇವರೆದ್ರುಗೇ ಮಾಡುದ್ರೂವಿ ಈ ನನ್ಮಕ್ಳು ಆಗಲೂ ಅಲ್ಲಾಡಲ್ವೆನ ಕನಪ್ಪ"೨೪

ಎಂಬ ವಿವೇಚನೆ ಹೊಸಜನಾಂಗ ತನ್ನ ಹಳೆಯ ತಲೆಮಾರನ್ನು ನೋಡುವ ತೀಕ್ಷ್ಣತೆಯನ್ನು ಕಾಣಬಹುದು. ಹೀಗೆ ಮನನೊಂದ ಬಸುರಾಜನು 'ಅಂಬೇಡ್ಕರ್ ಸಂಘ' ಕಟ್ಟುವ ಯೋಚನೆಯನ್ನು ಅಲ್ಲಿಗೇ ಕೈ ಬಿಟ್ಟು ತನ್ನ ಊರಿಗೆ ಮರಳುತ್ತಾನೆ. 'ತನ್ನ ವರ್ಗದವರ ಬದಲಾವಣೆ ಅಸಾಧ್ಯ' ಎಂಬ ಆತನ ನಿಲುವಿಗೆ ಅನಕ್ಷರತೆ, ಬಡತನ, ಮೌಢ್ಯತೆಗಳ ಕಾರಣವೆಂಬುದು ಆತನಿಗೆ ತಿಳಿಯದ ವಿಷಯಗಳೇನಲ್ಲ. ಕೊನೆಗೆ ಆತ ಬಿ. ಕೃಷ್ಣಪ್ಪನವರ ದಲಿತ ಸಂಘರ್ಷ ಸಮಿತಿಯ ಸದಸ್ಯನಾಗಿ ಅದರ ಧ್ಯೇಯೋದ್ದೇಶಗಳಿಗೆ ಬದ್ಧನಾಗಿ ಸಂಘದ ಇನ್ನೊಬ್ಬ ಸದಸ್ಯ ಸೋಮಶೇಖರನ ಸಾವು ಬಸುರಾಜುವಿನ ವ್ಯಕ್ತಿತ್ವದಲ್ಲಿ ಬದಲಾವಣೆ ಉಂಟುಮಾಡುತ್ತವೆ. ಅದು

"ಎಲ್ಲಾ ಜಾತಿ ಬಡವರಿಗೂ ಒಳ್ಳೇದು ಮಾಡು ಮಾತಾಯಿ ಮಾಳುಗವ್ವ" ಎಂದು ಬೇಡುವಷ್ಟು ಮಾರ್ಪಡಿಸುತ್ತದೆ. ಇಲ್ಲಿ ಬಸವರಾಜುವಿನ ಜೀವನ ದೃಷ್ಟಿ ನಿಷ್ಠೆ ಬಡತನ ಪರವಾಗಿರುವುದು ಮೆಚ್ಚಬೇಕಾಗಿದೆ. ಕಾದಂಬರಿಯ ಕೊನೆಗೆ ಬಸುರಾಜುವಿನ ಕನಸಿನಲ್ಲಿ ಮತ್ತೊಮ್ಮೆ ಚರಿತ್ರೆಯ ಪುನರಾವರ್ತನೆಯಾಗಿ ಸಮೃದ್ಧಿ ಸಂಕೇತಗಳಾದ ಮಾವು, ಹಲಸು, ತೆಂಗು ಬೆಳೆಯುವುದು ಮುಂದಿನ ಜೀವನದ ಆಶಾಯವನ್ನು ಭಿತ್ತರಿಸುತ್ತದೆ. ಈತ ಕಾಣುವ ಕನಸುಗಳು ಕಾದಂಬರಿ ಬೆಳವಣಿಗೆಗೆ ಪೂರಕವಾದವುಗಳು. ಕಾದಂಬರಿಯ ಮುಕ್ತಾಯದವರೆಗೂ ಈತನ ಆಶಯಗಳು ಚಿಂತನಾಶೀಲವಾಗಿರುತ್ತವೆ.

---

೨೪. ಮುಳ್ಳೂರು ನಾಗರಾಜ : ಮರಣ ಮಂಡಳ ಮಧ್ಯದೊಳಗೆ, ಕನ್ನಡ ಸಂಸ್ಕೃತಿ ಇಲಾಖೆ, ೧೯೯೨, ಪುಟ - ೮೧

ಹೀಗೆ ದಲಿತ ಜೀವನದ ಅನೇಕ ಸಮಸ್ಯೆಗಳು, ಭಾವನೆಗಳು, ವಿಚಾರಗಳು, ಕ್ರಾಂತಿಕಾರಕ ಧೋರಣೆಗಳು, ಮೇಲ್ವರ್ಗದವರ ವಿರುದ್ಧ ಹೋರಾಟ, ದಲಿತ ತನ್ನ ವರ್ಗದವರ ಏಳಿಗೆಯ ಕನಸು, ಇಂಥ ಅನೇಕ ಅಂಶಗಳನ್ನು ವಿವಿಧ ಮಟಲುಗಳ್ಳು ತನ್ನದಾಗಿಸಿಕೊಂಡಿರುವ ಈ ಕಾದಂಬರಿ ಕನ್ನಡ ಕಾದಂಬರಿ ಪ್ರಪಂಚಕ್ಕೆ ದಲಿತ ಬರಹಗಾರನೊಬ್ಬ ನೀಡಿದ ಶ್ರೇಷ್ಠ ಕೊಡುಗೆಯಾಗಿದೆ.

ದಲಿತ ಸಾಹಿತ್ಯದ ಮತ್ತೊಂದು ಪ್ರಮುಖ ಕಾದಂಬರಿ ಅರವಿಂದ ಮಾಲಗತ್ತಿ ಅವರ 'ಕಾರ್ಯ' ಇದರಲ್ಲಿ ಉತ್ತರ ಕರ್ನಾಟಕ ಪ್ರಾದೇಶಿಕ ಜನ ಜೀವನವನದ ಅನಾವರಣವಾಗಿದೆ. ಅಲ್ಲಿನ ದಲಿತ ಜನಾಂಗದ ಬದುಕಿನ ಓರೆ ಕೋರೆಗಳ ಚಿತ್ರಣ ನೀಡುವಲ್ಲಿ ಸಫಲವಾಗಿದೆ. 'ಕಾರ್ಯ' ದಲಿತ ಸಾಹಿತ್ಯದಲ್ಲಿ ವಿಭಿನ್ನ ನೆಲೆಯನ್ನು ಹೊಂದಿರುವ ಕಾದಂಬರಿ ಏಕೆಂದರೆ ಅನೇಕ ದಲಿತ ಲೇಖಕರು ದಲಿತರ ಶೋಷಣೆ ನಡೆಯುತ್ತಿರುವುದು ಸವರ್ಣಿಯರಿಂದ ಎಂದು ಚಿತ್ರಿಸುತ್ತಾ ಬಂದಿದ್ದರೆ ಇಲ್ಲಿ ದಲಿತ ಜನಾಂಗದೊಳಗಿನ ಮೌಢ್ಯ ನಂಬಿಕೆ - ಆಚರಣೆಗಳು ಹೇಗೆ ಅವರನ್ನೇ ಶೋಷಣೆಗೀಡುಮಾಡುತ್ತವೆ ಎಂಬುದನ್ನು ಲೇಖಕರು ಸ್ಪಷ್ಟವಾಗಿ ನಿರೂಪಿಸಿದ್ದಾರೆ.

'ಕಾರ್ಯ' ಎಂದರೆ, ಸಂಸ್ಕಾರದ ಮೂರನೇ ದಿನ ನಡೆಯುವ ಕ್ರಿಯೆ, ಇಲ್ಲಿ ಮಚಗಾರ ಜನಾಂಗದ 'ಬಂಗಾರವ್ವಳ' ಕಾರ್ಯದ ಸುತ್ತ ಇಡೀ 'ಮಚಗಾರ' ಜನಾಂಗದ ಜೀವನ ಅನಾವರಣಗೊಳ್ಳುತ್ತದೆ. ಸಂಪ್ರದಾಯದಂತೆ ಕಾರ್ಯಕ್ಕೆ ಸಿದ್ಧರಾಗಿ ಪಟಗಾರ ಮಲ್ಲಪ್ಪನು ಕುಳ್ಳಗಿಯನ್ನು, ಪಕೀರಪ್ಪನು ಕೌಳಮರವನ್ನು ಹಿಡಿದುಕೊಂಡು ಹೋಗುವಾಗ ಮಾರ್ಗಮಧ್ಯದಲ್ಲಿ ಮಲ್ಲಪ್ಪನ ಕೈಯಿಂದ ಕುಳ್ಳಗಿ ಕೆಳಗೆ ಬೀಳುವುದರಿಂದ ಕಾರ್ಯಕ್ಕೆ ಅಡ್ಡಿಯಾಗುತ್ತದೆ. ಕುಳ್ಳಗಿ ಬೀಳಲು ಕಾರಣವನ್ನು ವಿಶ್ಲೇಷಿಸುವ ಮಚಗಾರ ಜನಾಂಗದ ಮುಖಂಡರು ಮಲ್ಲಪ್ಪ ಗೌಡರ ಹೆಂಡತಿ 'ಪದ್ಮವತಿ' ಜೊತೆ ಮುಗಿದ್ದರಿಂದ ಕುಳ್ಳಗಿ ಕೆಳಗೆ ಬಿತ್ತು, ಎಂದು ಅದಕ್ಕೆ ಮಲ್ಲಪ್ಪನಿಗೆ ಶಿಕ್ಷೆ ಮತ್ತು ದಂಡ ಆಗಬೇಕು ಅದಕ್ಕಾಗಿ ಪಂಚಾಯ್ತಿ ಸೇರಿಸಿ ನ್ಯಾಯ ಮಾಡಬೇಕು ಎಂದು ಪಟ್ಟು ಹಿಡಿಯುತ್ತಾರೆ. ನ್ಯಾಯ ಮುಗಿವವರೆಗೂ ಯಾರ ಮನೆಯ ಒಲೆಯಲ್ಲೂ ಬೆಂಕಿ ಬಿಳಬಾರದೆ ಎಂದು ಆದೇಶವಾಗುತ್ತದೆ. ಇದು ಆ ಜನಾಂಗದ ನಂಬಿಕೆಯಾಗಿದೆ. ಜೊತೆಗೆ ಕಾರ್ಯದ ಸಮಾಧಿ ಸ್ಥಳ ತಲುಪುವರೆಗೂ ಕೌಳಮಾರವನ್ನು ಕೆಳಕ್ಕಿಡುವ ಹಾಗಿಲ್ಲ ಎಂಬ ಮತ್ತೊಂದು ಕ್ರೌರ್ಯ ನಂಬಿಕೆಯಿಂದ ಕಾಳಮರ ಹಿಡಿದ ಪಕೀರಪ್ಪನ ಸ್ಥಿತಿ ಚಿಂತಾಜನಕವಾಗುತ್ತದೆ. ನ್ಯಾಯ ತೀರ್ಮಾನಕ್ಕೆಂದೆ ಪಂಚರನ್ನು ಕರೆತರುವ ಸದಂರ್ಭದಲ್ಲಿ ನ್ಯಾಯ ತೀರ್ಮಾನವಾಗಲು ಗೌರಡ ಹೆಂಡತಿ ಪದ್ಮಾವತಿಯೂ ಬರಬೇಕು ಎಂದಾಗ ಅವಳನ್ನು ಕರೆತರಬಹುದು ಯಾರೆಂಬುದು ಯಕ್ಷ ಪ್ರಶ್ನೆಯಾಗಿ ಕಾಡುತ್ತದೆ. ಈ ಸಂದರ್ಭ ಮೇಲ್ವರ್ಗದವರನ್ನು ಕಂಡು ದಲಿತ ವರ್ಗದ ಜನರಿಗೆ ಇರುವ ಭಯ ಮತ್ತು ಅವರ ಅಧೈರ್ಯ ಅಸಹಾಯಕತೆಯನ್ನು ಸೂಚಿಸುತ್ತದೆ. ಕೊನೆಗೆ ಕೆಂಚಪ್ಪನಿಗೆ ಪದ್ಮಾವತಿಯನ್ನು ಕರೆತರುವ ಕೆಲಸ ವಹಿಸಿದಾಗ ಆತ ಹೋಗಿ ಗೌಡರು ಮನೆಯಲ್ಲಿಲ್ಲ, ಎಂದು ಹಿಂದಿರುತ್ತಾನೆ. ಆ ಹೊತ್ತಿಗೆ ವಂಚಗಾರರೆಲ್ಲಾ ಕುಡಿದ ನಿಶೆಯಲ್ಲಿದ್ದು ಅವರು ನೀಡುವ ಪ್ರತಿಕ್ರಿಯೆ ಹೀಗಿದೆ.

"ಇರಲಿಲ್ಲಂದ್ರ ಏನಾತು ಆಕಿಗೆ ಬಾ ಎನಬೇಕು" ಎಂದು ಚನ್ನಪ್ಪ ಹೇಳುತ್ತಾನೆ. ಮತೆ ಕೆಲವರು "ಅದ್ಯಾಂಗ ಮನೀಲಿ ಹಿರಿಯ್ಯ ಇಲ್ಲಾಂದ್ರಾ ಹೆಣ್ಮಗಳು ಹೊರಗೆ ಬಂದಾಳ !" ಎಂದಾಗ ಕೆಲವರು "ತ್ವಾಟದಾಗ ಬಿದ್ದಾಗ ಹಿರ್‍ಯಾ ಎದರೆ ಇದ್ರೇನು ?"[೨೫] ಎಂದು ಮಾತನಾಡುತ್ತಾರೆ. ಹೀಗೆ ಗುಂಪಿನಲ್ಲಿ

---

೨೫. ಅರವಿಂದ ಮಾಲಗತ್ತಿ : ಕಾರ್ಯ, ಶೈಲ ಪ್ರಕಾಶನ, ಮುದ್ದೇಬಿಹಾಳ ೧೯೯೦, ಪುಟ - ೩೫

ಆಣಕಗಳು ಕುಡಿದ ನಿಶೆಯಲ್ಲಿಯೇ ಮುಂದುವರೆಯುತ್ತದೆ. ಇಲ್ಲಿ ದಲಿತರು ನೇರವಾಗಿ ಪ್ರತಿಭಟನೆ ಮಾಡಿದಿದ್ದರು ಕುಡಿದ ಅಮಲಿನಲ್ಲಿ ಪ್ರತಿಭಟಿಸುವ ಧೈರ್ಯ ಹೊಂದುತ್ತಾರೆ. ಇದನ್ನು ಇಂದಿನ ಹಳ್ಳಿಗಳಲ್ಲಿ ವಾಸ್ತವ ಚಿತ್ರಣವಾಗಿದು ನೋಡಬಹುದು.

ಅನಂತರ ನ್ಯಾಯ ತೀರ್ಮಾನ ಮುರಿದು ಬೀಳುತ್ತದೆ. ಆಗ ಹೆಂಗಸರೆಲ್ಲಾ "ನೀವು ಹಕ್ಕಿಗೆ ಹಾಲ ಎರ್‍ದಂಗೂ ಆಯ್ತು, ಸತ್ತ ಮನಿಗೆ ಮುರಕೂಳ ತಿನ್ಸದಂಗ ಆಯ್ತು ನಾವು ಹೊಕ್ಕೀವಿ ಸಣ್ಣ ಮಕ್ಕಳಗತಿ ಏನಾಗ್ ಬೇಕು ನ್ಯಾಯ ಮಾಡತಾರುತೆ ನ್ಯಾಯ ಕುಡಿದ ನಿಶೆದಾಗ"[೨೬] ಎನ್ನುವಲ್ಲಿ ದಲಿತ ಮಹಿಳೆಯರಿಗಿದ್ದ ಜೀವನಾಶಕ್ತಿ ಗಂಡಸರಿಗೆ ಇಲ್ಲ ಎಂಬುದನ್ನು ತಿಳಿಸುತ್ತದೆ. ಇದು ಅವರ ಬದುಕಿನ ವ್ಯವಸ್ಥೆಯನ್ನು ಪ್ರತಿಪಾದಿಸಿದಂತಿದೆ. ದಲಿತ ಗಂಡಸರಿಗೆ ಹೆಂಡ ಸಿಕ್ಕಿದರೆ ಸಾಕು ಊಟವೇ ಬೇಕಿಲ್ಲ ಯಾರೂ ಬೇಕಿಲ್ಲ ಎಂಬುದನ್ನು "ಸತ್ಯಾಗ ಊಟಕ್ಕಿಂತ ಶೆರೆಯೇ ರುಚಿ !" ಎಂದು ಲೇಖಕರೇ ಹೇಳುತ್ತಾರೆ. ಕೊನೆಗೆ ಮಹಿಳೆಯರು ಮನೆಗೆ ಹೋಗುತ್ತಾರೆ. ಗಂಡಸರು ಅಲ್ಲೇ ಉಳಿಯುತ್ತಾರೆ. ಹೀಗೆ ದಲಿತ ಹೆಣ್ಣುಗಳ ಪರವಾಗಿ ಮತ್ತು ದಲಿತ ಗಂಡು ಹಾಗೂ ವ್ಯವಸ್ಥೆಯ ವಿರುದ್ಧವಾಗಿ ಕಾದಂಬರಿ ಚಲಿಸುತ್ತದೆ."[೨೭] ಇಲ್ಲಿ ಲೇಖಕರು ದಲಿತ ಮಹಿಳೆಯರ ಮೂಲಕ ಮೌಢ್ಯ ಸಂಪ್ರದಾಯದ ವಿರುದ್ಧ ಸೆಡ್ಡು ಹೊಡಸಿ ಅದನ್ನು ಮುರಿಸುವ ಕೆಲಸ ಮಾಡಿದ್ದಾರೆ.

ಇಲ್ಲಿಯ ತನಕ ಕೌಳಮರ ಹಿಡಿದು ನಿಂತಿದ್ದ ಫಕೀರಪ್ಪನ ಸ್ಥಿತಿ ಚಿಂತಾಜನಕವಾಗಿ ಅವನು ನಿಲ್ಲಲು ಅನುಕೂಲವಾಗವಂತೆ ಅವನ ಬೆನಿಗೆ ಒಂದು ಮರವನ್ನು ಕೊಟ್ಟು ಕೈ ಬಾಗದ ರೀತಿ ಕಟ್ಟಿರುತ್ತಾರೆ. ಇದು ದಲಿತರ ಮೂಢ ಆಚರಣೇಗಳು ಎಷ್ಟು ಕ್ರೂರವಾಗಿರುತ್ತವೆ ಮತ್ತು ಆ ನಂಬಿಕೆ ಆಚರಣೆಗಳೇ ಅವರನ್ನು ಶೋಷಣೆಗೆ ಬಳಗು ಮಾಡುತ್ತಿರುವುದನ್ನು ಲೇಖಕರು ತಿಳಿಸುತ್ತಾರೆ. ದಲಿತರಲ್ಲೂ ಚಂದಪ್ಪ ನಂಥವರು ಅಧಿಕಾರದ ಆಸೆಯಿಂದ ಕುತಂತ್ರ ಕೆಲಸ ಮಾಡುತ್ತಾರೆ ಎಂಬುದನ್ನು ಚಿತ್ರಿಸಲಾಗಿದೆ. ಕುಳ್ಳಿಗಿ ಬೀಳಲು ಕಾರಣ ಚಂದಪ್ಪ, ಪಟೇಗಾರಿಕೆಯ ಆಸೆಯಿಂದ ಶಾಂತಗೌಡನನ್ನು ತನ್ನ ಬಲೆಗೆ ಹಾಕಿಕೊಂಡು ನ್ಯಾಯ ತೀರ್ಮಾನದಲ್ಲಿ ತನ್ನ ಪರವಾಗಿರುವಂತೆ ಮಾಡವ ಚಂದಪ್ಪನ ಪಾತ್ರವ ಸೃಷ್ಟಿ ಮತ್ತು ಅಧಿಕಾರದ ಆಸೆಯಿಂದ ದಲಿತರಲ್ಲಿಯೇ ಇದ್ದು ಅವರನ್ನು ತೊಂದರೆ ಗೀಡು ಮಾಡುವುದು ದಲಿತರಿಂದಲೇ ದಲಿತರು ಶೋಷಣೆ ಮತ್ತು ಮೋಸಕ್ಕೆ ಒಳಗಾಗುವುದನ್ನು ಪ್ರೀತಿಬಿಂಬಿಸುತ್ತದೆ.

ಕಾರ್‍ಯದಲ್ಲಿ ಕಂಡುಬರುವ ಒಳ ಜಗಳಗಳು ದಲಿತರ ಬದುಕಿನ ಅನಾವರಣ ಮಾಡುತ್ತದೆ. ಡೋಹರ ಅಮ್ಮಣ್ಣ ಮತ್ತು ಚನ್ನಪ್ಪರ ನಡುವೆ ನಡೆಯುವ ಕುಲದ ವಿಷಯ ಕುರಿತಾದ ಜಗಳ ಇದಕ್ಕೆ ಉದಾಹರಣೆಯಾಗಿದೆ. ಎಲ್ಲಾ ಕಾದಂಬರಿಗಳಲ್ಲಿರುವಂತೆ ಇಲ್ಲೂ ದಲಿತರ ಪ್ರತಿಭಟನೆ ವ್ಯಕ್ತವಾಗಿದು ಅದು ಸೌಮ್ಯರೂಪದಲ್ಲಿದೆ. ವರಗದಶರಥ ಉದ್ದವಾಗಿ ಮೀಸೆ ಬೆಳೆಸಿ ಶಾಂತ ಗೌಡನ ವಿರುದ್ಧ ನಡೆದಾಡುತ್ತಾನೆ. ಅದನ್ನು ತೆಗೆಸಿದರೂ ಮತ್ತೆ ಮತ್ತೆ ಅದೇ ರೀತಿ ಮಾಡುವುದು ಮೇಲ್ವರ್ಗದ ವಿರುದ್ಧ ಬಂಡಾಯದ ಪ್ರತೀಕವಾಗಿದೆ.

ಕಾರ್‍ಯದಲ್ಲಿ 'ಕಪ್ಪುಚಹ' ಕುಡಿದು ಮಲಗುವ ದಲಿತರು ಅವರ ಬದುಕು ಇನ್ನೂ ಕಪ್ಪಾಗಿದೆ, ಕತ್ತಲಾಗಿದೆ ಎಂಬುದರ ಸಂಕೇತವಾಗಿದ್ದು ಇನ್ನೂ ಪೂರ್ಣ ಬೆಳಕು ಕಂಡಿಲ್ಲ ಎಂಬುದನ್ನು ತಿಳಿಸುತ್ತದೆ. ಇಲ್ಲಿ ಕಂಡುಬರುವ ಬಂಗಾರವ್ವಳ್ಳ ಮಗ ಸೂರ್ಯಕಾಂತ, ಸೂರ್ಯನನ್ನು ಕಾಣುವ ದೃಷ್ಟಿಯುಳ್ಳವನಾದರೂ ಅವನ

---

೨೬. ಅರವಿಂದ ಮಾಲಗತ್ತಿ : ಕಾರ್ಯ, ಶೈಲ ಪ್ರಕಾಶನ, ಮುದ್ದೇಬಿಹಾಳ ೧೯೯೦, ಪುಟ - ೧೬

೨೭. ಬಿ.ಎ. ವಿವೇಕ್‌ರೈ : ಸಾಹಿತ್ಯ ವಿಮರ್ಶೆ, ಪುಸ್ತಕ ಪ್ರಾಧಿಕಾರ, ಬೆಂಗಳೂರು ೧೯೯೦, ಪುಟ - ೧೪೩

ವಯಸ್ಸು ಮತ್ತು ಮಿತಿಗಳಿಂದಾಗಿ ಆತ ದಲಿತರನ್ನು ಕತ್ತಲಿನಿಂದ ಬೆಳಕಿನೆಡೆಗೆ ಕೊಂಡೂಯ್ಯೂವುದಿಲ್ಲ. ಆದರೆ ಸೂರ್ಯಕಾಂತಿನಂತಹ ಒಬ್ಬ ಓದುಗ ಕಾರ್ಯ ಕಾದಂಬರಿಗೆ ಹೇಗೆ ಪ್ರತಿಕ್ರಿಯೆ ವ್ಯಕ್ತ ಪಡಿಸುತ್ತಾನೆ ಎನ್ನುವುದು ದಲಿತ ಶಿಕ್ಷಿತ ಓದುಗರ ದೃಷ್ಟಿಯಿಂದ ದಲಿತ ಅಧ್ಯಯನ ಮಾಡುವಲ್ಲಿ ಉಪಯುಕ್ತವಾಗಬಹುದು.

ಕಾದಂಬರಿಯ ಅಂತ್ಯದಲ್ಲಿ ರುದ್ರಗೌಡ ಮತ್ತು ವರಗ ದಶರಥ ಇಬ್ಬರೂ ನೀರಿನಲ್ಲಿ ಮುಳುಗಿ ಸಾಯುವುದಕ್ಕೆ ಕಾರಣ ಹುಡುಕುವುದು ಕಷ್ಟವಾಗುತ್ತದೆ. ಇಲ್ಲಿ ರುದ್ರಗೌಡ ತನ್ನ ತಮ್ಮನ ಹೆಂಡತಿ ಕೆಳಜಾತಿಯವನೊದಿಗೆ ಹೋದುದರಿಂದ ಮಾನಭಾದಿಸದೇ ಸತ್ತ ಎನ್ನಬಹುದು. ಆದರೆ ದಲಿತ ವರ್ಗದ ದಶರಥನು ಸತ್ತುದು ತನ್ನ ಮಗ ಬೇರೆ ಜಾತಿಯ ಹೆಣ್ಣೊಂದಿಗೆ ಹೋದುದರಿಂದ ಎಂದು ಕೊಳ್ಳಬೇಕಾಗುತ್ತದೆ. ಏಕೆಂದರೆ ಇಲ್ಲಿ ಆತ ದಲಿತನಾದರೂ ಸಹ ತನಗೂ ತನ್ನದೇ ಆದ ಸ್ಥಾನ ಮಾನ ಇದೆ ಎಂದು ಸಮಾನತೆಯನ್ನು ಕಲ್ಪಿಸಲು ಲೇಖಕರು ಮಾಡಿರುವ ಪ್ರಯತ್ನವೇ ಎನ್ನಬಹುದು.

ಹೀಗೆ ಕಾರ್ಯ ಕಾದಂಬರಿಯಲ್ಲಿ ದಲಿತರ ಸಂಸ್ಕೃತಿ ಅವರ ಬದುಕಿನೊಂದಿಗೆ ಮುಖಾಮುಖಿಯಾಗಿ ನಿಂತು ಯಾವ ರೀತಿ ತನ್ನ ಅಧಿಕಾರವನ್ನು ಅವರ ಮೇಲೆ ಸ್ಥಾಪಿಸ ಹೊರಟಿದೆ ಎಂಬುದನ್ನು ಆ ಸಂಪ್ರದಾಯವನ್ನು ಮುರಿಯಲು ದಲಿತರ ಬದುಕು ಪೂರ್ಣ ಬೆಳಕಿನೆಡೆಗೆ ಸಾಗಲು ಸೂರ್ಯಕಾಂತನಂಥ ಶಿಕ್ಷಿತರು ದಲಿತರಲ್ಲಿ ಹುಟ್ಟಬೇಕು ಎಂಬುದನ್ನು ಅರ್ಥಪೂರ್ಣವಾಗಿ ಪ್ರಜ್ಞಾಪೂರ್ವಕವಾಗಿ ಚಿತ್ರಿಸಿರುವರ ಲೇಖಕರ ಪ್ರಯತ್ನ ಸಫಲದ ಹಾದಿಯಲ್ಲಿದೆ.

ದಲಿತ ಸಾಹಿತ್ಯದ ಮತ್ತೊಂದು ಉತ್ತಮ ಕಾದಂಬರಿಗಳಲ್ಲಿ ಶಿವರುದ್ರಯ್ಯ ಕಲ್ಲೋಳಿಕರ್ ಅವರ **'ಹೊಲಗೇರಿಯ ರಾಜಕುಮಾರ'**. ಇದು ಬೆಳಗಾವಿ ಗಡಿಭಾಗದ ದಲಿತರು ಉಪಯೋಗಿಸುವ ಕನ್ನಡ, ಮರಾಠಿ, ಹೊಂಗೇರಿಯ ಭಾಷೆಯನ್ನು ಉಪಯೋಗಿಸಿ ಸತ್ವ ಪೂರ್ಣವಾಗಿ ಹೊರಹೊಮ್ಮುವಂತೆ ಮಾಡಿದ್ದಾರೆ. ಕಲ್ಲೋಳಿಕರ್ ಮೂಲತಃ ದಲಿತ ಹೋರಾಟಗಾರರಾಗಿರುವುದರಿಂದ ಹಾಗೂ ದಲಿತ ಚಳುವಳಿಗಳಲ್ಲಿ ನೇರವಾಗಿ ಭಾಗವಹಿಸುತ್ತಿರುವುದರಿಂದ ಅವರ ಕಾದಂಬರಿಯ ಮೂಲ ನೆಲೆಗಟ್ಟು ಹೋರಾಟವೇ ಆಗಿದೆ.

ಒಂದು ಸತ್ಯ ಘಟನೆಯನ್ನು ಆಧರಿಸಿ ಕಾದಂಬರಿ ರಚಿಸಲಾಗಿದೆ. ಬೆಳಗಾವಿಯ ಆಫೀಸಿನೊಂದರಲ್ಲಿ ಪೋಸ್ಟ್ ಮಾಸ್ಟರೆಂದು ಕೆಲಸ ಮಾಡುವ ಹಾಗೂ ಜಾತಿಯಿಂದ ಹೊಲೆಯರಾದ ಕಲ್ಲಪ್ಪ ಚಂದ್ರಪ್ಪ ಕೋಲ್ಕರ್ ತಾನು ಕುರುಂದವಾಡ್ ಸಂಸ್ಥಾನದ ರಾಜಕುಮಾರನೆಂದೂ ತಾನು ಚಿಕ್ಕವನಿದ್ದಾಗ ಅಲ್ಲಿ ಕ್ಷಿಪ್ರ ರಾಜ್ಯಕ್ರಾಂತಿಯಾಗಿ ಆಗಿನ ಕುರುಂದುವಾಡದ ಸಂಸ್ಥಾನದ ರಾಜನಾಗಿದ್ದ ತನ್ನ ಅಜ್ಜ ಹಾಗೂ ತನ್ನ ತಂದೆ ತಾಯಿಯರುಗಳನ್ನೆಲ್ಲಾ ಕೊಲ್ಲಲಾಯಿತೆಂದೂ ತನ್ನನ್ನು ಅರಮನೆಯಲ್ಲಿ ಕೆಲಸಕ್ಕಿದ್ದ ಹೊಲೆಯನೊಬ್ಬ ರಕ್ಷಿಸಿ, ತನ್ನ ಜೊತೆಗೆ ಕರೆದುಕೊಂಡು ಹೋದನೆಂದು ಹೇಳಿ ತನ್ನ ಅಜ್ಜಿ ಅಪ್ಪರಿಗೆ ಸೇರಿದ್ದ ಸಂಸ್ಥಾನದ ಆಸ್ತಿಪಾಸ್ತಿಗಳನ್ನು ತನಗೆ ಹಿಂದಿರುಗಿಸಬೇಕೆಂದು ಬೆಳಗಾವಿ ವಿಭಾಗಾಧಿಕಾರಿಗಳ ಕಛೇರಿಯಲ್ಲಿ ಅರ್ಜಿ ಸಲ್ಲಿಸಿದ್ದರು. ಕೋಲ್ಕರ್ ಹತ್ತಿರ ಅವರ ವಾದಕ್ಕೆ ಪುಷ್ಟಿ ನೀಡುವ ಅನೇಕ ಅಮೂಲ್ಯ ದಾಖಲೊಳಿದ್ದವು. ಅವರ ದಾಖಲೆಗಳಂತೆ ಬೆಳಗಾವಿಯ ಸುತ್ತಮುತ್ತಲಿನ ೫೬೩೦ ಎಕರೆ ಭೂಮಿ ಅವರಿಗೆ ಸೇರಬೇಕಾಗಿತ್ತು. ವಿಭಾಗಾಧಿಕಾರಿಗಳು ಈ ಪ್ರಕರಣವನ್ನು ಕಿತ್ತು ಹಾಕಿದ್ದರೂ ಕೋಲ್ಕರ್ ಗೆಲ್ಲುವ ಆಸೆಯನ್ನು ಬಿಟ್ಟಿರಲಿಲ್ಲ. ಕೋರ್ಟ್ ಅಲೆಯುವ ಕಾಯಕ ಮುಂದುವರೆಯುತ್ತಲೇ ಇತ್ತು.

ಈ ಘಟನೆಯನ್ನು ವಸ್ತುವಾಗಿಸಿಕೊಂಡಿರುವ 'ಹೊಲಗೇರಿಯ ರಾಜಕುಮಾರ'ನಲ್ಲಿ ಬರುವ ಮಾದೇವ, ಕೋಲ್ಕರ್ ಅವರನ್ನು ಪ್ರತಿನಿಧಿಸುತ್ತಾನೆ. ಸತ್ಯ ಘಟನೆಗಳನ್ನು ಯಥಾವತ್ತಾಗಿ ತಂದಿದ್ದರೂ, ಕಲ್ಲೋಳ್ಳಿಕರ್ ಅವರು ಅದನ್ನು ಸಾಹಿತ್ಯವಾಗಿ ಚಿತ್ರಿಸಿದ್ದಾರೆ. ಸತ್ಯ, ಇತಿಹಾಸ, ಕಲ್ಪನೆ ಇವುಗಳಲ್ಲಿಂದ ಹಾದು ಬರುವ ಈ ಕಾದಂಬರಿ ನಮಗೆ ಒಂದು ನವಲೋಕದ ದರ್ಶನ ಮಾಡಿಸುತ್ತದೆ.

ಇಲ್ಲಿನ ಮಾದೇವ ಹುಟ್ಟಿನಿಂದ ಕ್ಷತ್ರಿಯನಾದರೂ ಹೊಲೆಯರ ಜೊತೆಯಲ್ಲಿ ಬೆಳೆಯುತ್ತಾನೆ ಹೊಲೆಯರ ಸಕಲ ಲಕ್ಷಣಗಳನ್ನು ಹೆಸರು ಕುಲ, ಅಡ್ಡ ಹೆಸರು ಜಾತಿಯ ಪ್ರಮಾಣ ಪತ್ರಗಳನ್ನು ಪಡೆಯುತ್ತಾನೆ. ಸವರ್ಣಿಯರ ವಿರುದ್ಧ ದಲಿತರು ನಡೆಸುವ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾನೆ. ಅಂಬೇಡ್ಕರ್ ಬಗ್ಗೆ ಅನನ್ಯ ಭಕ್ತಿ ಭಾವ ಹೊಂದಿದ್ದ ಮಾದೇವ ತಾನು ದಲಿತನಲ್ಲ ಎಂದು ತಿಳಿದಾಗ ಸವರ್ಣಿಯನಾಗಲು ಹೆಣಗಾಡುತ್ತಾನೆ. ಅಲ್ಲಿಯವರೆಗೆ ಅವನಿಗೆ ಪ್ರಿಯವಾಗಿದ್ದ ವಸ್ತುಗಳು ಅಪ್ರಿಯವಾಗುತ್ತವೆ. ಹೆಂಡತಿಯೂ ಬೇಡವೆನಿಸುತ್ತದೆ. ತಾನು ಕ್ಷತ್ರಿಯ ಕುಲದ ರಾಜಕುಮಾರ ವಂಶದನನೆಂದೂ ಈ ಎಲ್ಲಾ ಜನರಿಂದ ದೂರವಾಗಿ ತನ್ನ ಜನತೆಗೆ ಹೋಗಬೇಎಕಂಬ ಹಂಬಲವಾಗಿ ಏಕಾ ಏಕಿಯಾಗಿ ಸವರ್ಣಿಯತೆಯನ್ನು ಅನುಭವಿಸ ತೊಡಗುತ್ತಾನೆ. ಇಲ್ಲಿಯವರೆಗೆ ಅನವ ಸುತ್ತಲಿರುವ ಹೊಲೆಯರು ಬೇಡವಾಗುತ್ತಾರೆ. ಅಂಬೇಡ್ಕರ್ ಭಕ್ತನಾಗಿದ್ದವನು ಅಂಬೇಡ್ಕರ್ ಫೋಟೋ ಜಾಗದಲ್ಲಿ ಶಿವಾಜಿಯ ಫೋಟೋವನ್ನು ಹಾಕುತ್ತಾನೆ. ಹೆಂಡತಿ ಸುಮತಿ ಏನಾದರ ತಪ್ಪು ಮಾಡಿದರೆ "ಆ ಹೊಲ್ಯೆಯರಂಗೆ ಮಾಡಬೇಡ "[೨೮] ಎಂದು ರೇಗುತ್ತಾನೆ.

ಇಲ್ಲಿ ಒಂದು ಸಂಸ್ಕೃತಿಯಿಂದ ಇನ್ನೊಂದು ಸಂಸ್ಕೃತಿಗೆ ರೂಪಾಂತರಗೊಳ್ಳಲು ಮಾಡುವ ಪ್ರಯತ್ನ ಅನನ್ಯವಾದುದು. ಹೊಟ್ಟನಿಂದಲೇ ಆತ ಒಂದು ಸಂಸ್ಕೃತಿಯಿಂದ ಇನ್ನೊಂದು ಸಂಸ್ಕೃತಿಗೆ ವರ್ಗಾವಣೆ ಗೊಂಡಿದ್ದಾನೆ. ಅದು ಅಪ್ರಜ್ಞಾಪೂರ್ವಕವಾಗಿ ನಡೆದ ಸಂಗತಿ. ಈಗ ಪ್ರಜ್ಞಾಪೂರ್ವಕವಾಗಿ ಆತ ಇನ್ನೊಂದು ಸಂಸ್ಕೃತಿಯಿಂದ ತನ್ನ ಮೊದಲ ಸಂಸ್ಕೃತಿಗೆ ಹಿಂದಿರುಗಿ ಬರಬೇಕಾಗಿದೆ. ಆತ ಎಷ್ಟೋ ಬಯಸಿದ್ದರೂ ಮೊದಲಿನ ಸಂಸ್ಕೃತಿ ಆತನನ್ನು ಹತ್ತಿರ ಬರಲು ಬಿಡುವುದಿಲ್ಲ. ಆದರೂ ಈತನ ಆಂತರಿಕ ಸವರ್ಣಿಯತೆ ತನ್ನ ಜನರೆಡೆಗೆ ಕರೆದುಕೊಂಡು ಹೋಗುತ್ತದೆ. ಅಲ್ಲಿ ಆತ ನಿಜ ಅನುಭವಿಸಿ ಮತ್ತೆ ಮೊದಲಿದ್ದ ಸಂಸ್ಕೃತಿಗೆ ಮರಳುತ್ತಾನೆ. ಈ ರೀತಿಯ ಎಲ್ಲಾ ಘಟನೆಗಳನ್ನು ಮಾದೇವ ಪಡುವ ಮಾನಸಿಕಯಾತನೆಯನ್ನು ಕಲ್ಲೋಳ್ಳಿಕರ್ ತುಂಬಾ ಪರಿಣಾಮಕಾರಿಯಾಗಿ ಚಿತ್ರಿಸಿ ಕಾದಂಬರಿಯನ್ನು ವಾಸ್ತವ ಲೋಕದ ಮಡಲಿಗೆ ಕೊಂಡೂಯ್ದು ಅನನ್ಯತೆ ಮೆರೆದಿದ್ದಾರೆ. ಇಲ್ಲಿ ದಲಿತ ಮತ್ತು ದಲಿತೇತರ ಸಂಸ್ಕೃತಿಯ ಸಂಘರ್ಷ ಇವುಗಳ ನಡುವೆ ಮಾದೇವನ ತೊಳಲಾಟವನ್ನು ಸ್ಪಷ್ಟವಾಗಿ ಅಭಿವ್ಯಕ್ತಿಸಲಾಗಿದೆ. ಒಟ್ಟಾರೆ ಪ್ರಮುಖ ದಲಿತ ಕಾದಂಬರಿಗಳ ಸಾಲಿನಲ್ಲಿರಬಹುದಾದ ಕಾದಂಬರಿಯಾಗಿದೆ.

ಓದುಗರ ಗಮನ ಸೆಳೆಯುವ ಮತ್ತೊಂದು ಕಾದಂಬರಿ ಮ.ನ.ಜ.ಅವರಿಗೆ 'ಮಾಗಿ' ಇಲ್ಲಿ ಬದುಕಿನ ಸಂಪೂರ್ಣ ಚಿತ್ರಣವಿದೆ. ದಲಿತ ಸಂಸ್ಕೃತಿಯನ್ನು ತುಂಬುವಿವರವಾಗಿ ಅರ್ಥಪೂರ್ಣವಾಗಿ ಕಟ್ಟಿಕೊಡುವ ಈ ಕಾದಂಬರಿಗೆ ಮಹತ್ವ ಸ್ಥಾನವಿದೆ. ಇಲ್ಲಿಯ ನಾಯಕಿ ಮಾಗಿ ಅಥವಾ ಮಾಗವ್ವನಲ್ಲಿ ಉತ್ಕಟವಾದ ಜೀವನೋತ್ಸಾಹವಿದೆ. ಎಲ್ಲ ನೋವುಗಳನ್ನು ಸಹಿಸಿಕೊಂಡು ಬೆಳೆಯುವ ತಾಕತ್ತಿದೆ. ದಲಿತ ಶಕ್ತಿಯ ಅದಮ್ಯ

೨೮. ಶಿವರುದ್ರಯ್ಯ ಕಲ್ಲೋಳಿಕರ್ : ಹೊಲಗೇರಿಯ ರಾಜಕುಮಾರ, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು ೨೦೦೪, ಪುಟ ೬೭

ಚೇತನದಂತೆ ಮಾಗಿ ಇಲ್ಲಿ ಚಿತ್ರಿತವಾಗಿದ್ದಾಳೆ. ದಲಿತ ಬದುಕಿನ ಅನೇಕ ಸತ್ಯಾಂಶಗಳನ್ನು ಕನ್ನಡ ಸಾಹಿತ್ಯಕ್ಕೆ ಅಪರಿಚಿತವಾಗಿದ್ದ ಅನೇಕ ಸಂಗತಿಗಳನ್ನು ಈ ಕಾದಂಬರಿ ಪರಿಚಯಿಸುತ್ತದೆ. ಇಲ್ಲಿ ಪ್ರತಿಭಟನೆಯಿಲ್ಲ, ಬದುಕಿನ ತೀವ್ರ ಹೋರಾಟವಿದೆ. ಪರಿಸರದ ಕಾರ್ಯವನ್ನೆಲ್ಲ ಅರಗಿಸಿಕೊಂಡು, ಗಂಡ ಭಾವಮೈದುನರು, ಅತ್ತಿಗೆ ನಾದನಿಯರು, ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ಇವರೆಲ್ಲರು ಕೊಡುವ ಕಷ್ಟಗಳನ್ನು ಸಹಿಸಿಕೊಂಡು ದಿಟ್ಟ ಜೀವನ  ನಡೆಸುವ ಮಾಗಿಯು ಬದುಕನ್ನು ಅರ್ಥಪೂರ್ಣವಾಗಿ ಅರಿತ ಮಹಿಳೆಯಾಗಿದ್ದಾಳೆ.

ಈ ಕೃತಿಯ ಕಥೆಯ ಹರವು ವಿಶಿಷ್ಟವಾಗಿದೆ. ಮಾವ ಪೈಲ್ವಾನ ದಾಸಪ್ಪನವರ ಸಂಭ್ರಮದ ಬದುಕಿನಿಂದ ಪ್ರಾರಂಭವಾದ ಮಾಗಿಯ ಕಥೆ ತನ್ನ ಮಗ ವಸಂತನ ಹೊಂಬೆಳಕಿನೊಂದಿಗೆ ಮುಕ್ತಾಯವಾಗುತ್ತದೆ. ಪ್ರಾರಂಭ ಮತ್ತು ಮುಕ್ತಾಯ ಸುಖದ ಮತ್ತು ಆಶಾದಾಯಕವಾದ ಘಟನೆಗಳನ್ನುಗೊಂಡಿದ್ದರೆ ಇವೆರಡರ ನಡುವೆ ಹಬ್ಬಿಕೊಂಡಿರುವ ಮಾಗಿಯ ಬದುಕು ತುಂಬುಯಾತನೆಯಿಂದ ಕೂಡಿದೆ. ಈ ಯಾತನೆಗಳಲ್ಲಿ ಬೆಂದು ನೊಂದ ಮಾಗಿ ಪುಟಕಿಟ್ಟ ಚಿನ್ನದಂತೆ ವಿಜೃಂಭಿಸುತ್ತಾಳೆ. ಇದು ಕಾದಂಬರಿಯ ಅರ್ಥಪೂರ್ಣ ಆಶಯವೂ ಆಗಿದೆ.

ಹೀಗೆ ಕನ್ನಡ ದಲಿತ ಸಾಹಿತ್ಯದಲ್ಲಿ ಅನೇಕ ಕಾದಂಬರಿಗಳು ಬಂದು ಅವುಗಳಲ್ಲಿ ಮುಖ್ಯವಾದವುಗಳನ್ನು ಮಾತ್ರ ನಾನು ಚರ್ಚಿಸಿದ್ದೇನೆ. ಪುಟಮಿತಿ ಮತ್ತು ವಿಷಯದ ಸಂಕ್ಷಿಪ್ತತೆಯಿಂದ ಎಲ್ಲಾ ಕಾದಂಬರಿಗಳನ್ನು ವಿವರಿಸುವುದು ಕಷ್ಟವಾಗಿರುವುದರಿಂದ ಒಂದು ಮಿತಿ ಹಾಕಿಕೊಂಡಿದ್ದೇನೆ.

## ದಲಿತ ನಾಟಕಗಳು

ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ನಾಟಕಕ್ಕೆ ಪ್ರಸ್ತುತ ವಿಶಷ ಗೌರವವಿರುವುದು ಎಲ್ಲರಿಗೂ ಗೊತ್ತಿರುವ ವಿಚಾರವೇ ಆಗಿದೆ. ಕಾರಣವೇನೆಂದರೆ ಸಮಾಜ ಹಾಗೂ ನಾಟಕಕ್ಕೆ ಇರುವ ಸಂಬಂಧ ಅಂಥದ್ದು. ಎಲ್ಲಾ ಕಾಲಕ್ಕೂ ನಾಟಕಕ್ಕೆ ಗೌರವ ಸ್ಥಾನವಿದೆ. ಅಂತೆಯೇ ಇಲ್ಲಿ ನಾನು ಕನ್ನಡ ದಲಿತ ಕೆಲವು ನಾಟಕಗಳನ್ನು ಕುರಿತು ಚರ್ಚಿಸಬಯಸುತ್ತೇನೆ.

ಕನ್ನಡ ದಲಿತ ನಾಟಕಗಳನ್ನು ಇದುವರೆಗೆ ರಚಿಸುವ ಲೇಖಕರು ಬಹುಮುಖ ಸಾಮರ್ಥ್ಯದಿಂದ ಸಾಹಿತ್ಯಿಕ ವಲಯದಲ್ಲಿ ಈಗಾಗಲೇ ಗುರುತಿಸಿಕೊಂಡವರೇ ಆಗಿದ್ದಾರೆ. ಅಲ್ಲದೆ ಒಂದಕ್ಕಿಂತ ಹೆಚ್ಚು ಪ್ರಕಾರಗಳಲ್ಲಿ ಪರಿಣಿತಿ ಪಡೆದವರಾಗಿದ್ದಾರೆ. ಇವರಲ್ಲಿ ಪ್ರೊ, ಸಿದ್ದಲಿಂಗಯ್ಯ ಪ್ರೊ, ಅರವಿಂದಮಾಲಗತ್ತಿ, ಪ್ರೊ, ಚನ್ನಣ್ಣವಾಲೀಕಾರ ಪ್ರೊ, ಮಾ ಜವರಯ್ಯ, ಸತ್ಯಾನಂದ ಪಾತ್ರೋಟ, ಎಲ್. ಹನುಮಂತಯ್ಯ, ಮೂಡ್ನಾಕೂಡು ಚಿನ್ನಸ್ವಾಮಿ, ಎಂ. ಲೋಕೇಶ್ ಮಂತಾದವರು.

ಇವರೆಲ್ಲರ ನಾಟಕಗಳಲ್ಲಿ ಒಂದು ನಿರ್ದಿಷ್ಟ ಸಂಸ್ಕೃತಿಯ ಚಿಂತನ ವಿಧಾನಗಳು ಮತ್ತು ಬದುಕಿನ ಪರ್ಯಾಯ ದಾರಿಗಳನ್ನು ಶೋಧಿಸುವ ಹಂಬಲವೇ ಪ್ರಧಾನವಾದದು. ಇವರೆಲ್ಲರ ಎಲ್ಲಾ ನಾಟಕಗಳನ್ನು ಸಾಮಾಜಿಕ ನೆಲೆಯಲ್ಲಿ ಅಧ್ಯಯನ ಮಾಡುವಂಥದ್ದು ಅನಿವಾರ್ಯ ಆದರೂ, ಈ ಸಂದರ್ಭದಲ್ಲಿ ಅದು ಅನೇಕ ಮಿತಿಗೆ ಒಳಪಡುತ್ತದೆ. ಈ ಕಾರಣಕ್ಕಾಗಿ ನನಗೆ ಪ್ರಮುಖನಿಸಿದ ಕೆಲವು ಪ್ರಾತಿನಿಧಿಕ ನಾಟಕ ಕೃತಿಗಳನ್ನು ಪರಿಗಣಿಸಿದ್ದೇನೆ.

ದೇವರಾಯ ಇಂಗಲೆ ಅವರು ೧೯೧೮ ರಲ್ಲಿ ರಚಿಸಿದ 'ಬಹಿಷ್ಕೃತ ಭಾರತ ಬೋಧಿನಿ' (ಯಲ್ಲಮ್ಮ) ಎಂಬ ಅಪ್ರಕಟಿತ ಆದರೆ ಪ್ರದರ್ಶನಗೊಂಡ ನಾಟಕವು ಕನ್ನಡದಲ್ಲಿ ಮೊದಲ ದಲಿತ ನಾಟಕವೆಂದು ಗುರುತಿಸುತ್ತಾರೆ. ಸಾಮಾಜಿಕ ಅನಿಷ್ಠ ಪದ್ಧತಿಯಾದ ದೇವದಾಸಿ ಮತ್ತು ಜೋಗತಿ ಪದ್ಧತಿಯ ವಿರುದ್ಧ ಒಂದು ಸಾಮಾಜಿಕ ಎಚ್ಚರವನ್ನು ಸಾರುತ್ತ, ದಲಿತರಿಗೆ ಸಾಂಸ್ಕೃತಿಕ ಪುನರುಜ್ಜೀವನದ ಅವಶ್ಯಕತೆಯನ್ನು ಇಂಗಳೆ ಅವರು ಈ ನಾಟಕದ ಮೂಲಕ ಪ್ರತಿಪಾದಿಸುತ್ತಾರೆ.

ದಲಿತ ಕವಿ ಪ್ರೊ, ಸಿದ್ದಲಿಂಗಯ್ಯ ಅವರು ಏಕಲವ್ಯ (೧೯೮೪) ಪಂಚಮ ಮತ್ತು ನೆಲಸಮ (೧೯೮೦) ಎಂಬ ಮೂರು ನಾಟಕಗಳನ್ನು ರಚಿಸಿದ್ದಾರೆ. ಏಕಲವ್ಯ ನಾಟಕ ಕರ್ನಾಟಕದಾದ್ಯಂತ ಅನೇಕ ರಂಗಪ್ರಯೋಗಗಳನ್ನು ಕಂಡು ದಲಿತ ವರ್ಗದ ಆಶೋತ್ತರಗಳನ್ನು ಸಮಾಜಕ್ಕೆ ತಿಳಿಯುಪಡಿಸುವಲ್ಲಿ ಯಶಸ್ವಿಯಾಗಿದೆ. ಹನ್ನೊಂದು ದೃಶ್ಯಗಳಿರುವ ಈ ನಾಟಕದಲ್ಲಿ ಪುರಾಣ ಕತೆಯನ್ನು ವರ್ತಮಾನದ ಬದುಕಿಗೆ ಸಂಬಂಧಿಸಿ ಮುಖಾಮುಖಿಗೊಳಿಸುತ್ತಾರೆ.

ದ್ರೋಣಾಚಾರ್ಯರಿಗೆ ತನ್ನ ಬಲಗೈ ಹೆಬ್ಬೆರಳು ಗುರುಕಾಣಿಕೆಯಾಗಿ ಅರ್ಪಿಸಿದ ಮುಗ್ಧ ಏಕಲವ್ಯ ಎಚ್ಚೆತ್ತ ಏಕಲವ್ಯನಾಗಿ ಸಾಮಾಜಿಕ ಅಸಮಾನತೆಯ ವಿರುದ್ಧ ಕ್ರಾಂತಿಕಾರಕನಾಗಿ ಸಿಡಿದು ನಿಲ್ಲುವ ಮಾನವೀಯ ಹಂಬಲದವನಾಗಿದ್ದಾನೆ. ಹೀಗಾಗಿ ಏಕಲವ್ಯ ಮನುಕುಲದ ಜಾಗೃತ ಪ್ರಜ್ಞೆಯ ಮಾನವೀಯ ಸಂಕೇತ ಅವನು. ನಾಟಕಕಾರರೇ ಹೇಳುವ ಹಾಗೆ ಇದು

"ಹಾಸ್ಯದ ಹೊನಲಲ್ಲ, ಶೃಂಗಾರದ ಮಡುವಲ್ಲ

ಸಂಘರ್ಷದ ಕಥೆ ಬಂಧುಗಳೇ

ಅಡವೀಯ ಬಾಲಸು ಘನ ಏಕಲವ್ಯನು ಹೋರಾಟ ಮಾಡಿದ ಕಥೆಯಾಗಿದೆ. "[೧] ಎನ್ನುತ್ತಾರೆ.

ಈ ನಾಟಕದಲ್ಲಿ ನಾಗರಿಕ ಸಹಜ ಬದುಕಿನ ಮೌಲ್ಯಗಳ ಸಂಘರ್ಷವೇ ಪ್ರಧಾನವಾಗಿದ್ದು ಕಾಡಿನ ಸಹಜತೆ, ಮುಗ್ಧತೆ, ಸರ್ವಜೀವ ಚೈತನ್ಯವನ್ನು ಕಾಪಾಡುವ ಎದೆಯ ತುಡಿತದ ಮುಂದೆ ನಗರ ಬದುಕಿನ ಸ್ವಾರ್ಥ, ಅಹಂಕಾರ, ಕ್ರೌರ್ಯಗಳು ನಡೆಸುವ ಸಣ್ಣತನಗಳು ಬಯಲಾಗುತ್ತವೆ. ಜೊತೆಗೆ ಆಧುನಿಕ ಶಿಕ್ಷಣ ಸಮಾಜದಲ್ಲಿ ಹೇಗೆ ಅಪವ್ಯಯವಾಗುತ್ತಿದೆ ಎಂಬುದನ್ನು ಚಿತ್ರಿಸಲಾಗಿದೆ.

"ಸಾಮಾಜಿಕ ನೆಲೆಯಲ್ಲಿ ಯುದ್ಧದ ನೈಪುಣ್ಯತೆಯು ದಾಯಾದಿಗಳ ಕಗ್ಗೊಲೆಗೆ, ಬಂಧುಮಿತ್ರರ ಹತ್ಯೆಗೆ, ಅಸಂಖ್ಯಾತರ ಅಂಗವಿಕಲತೆಗೆ, ಅಗಣಿತ ವೈಧವ್ಯಕ್ಕೆ ಹೇಗೆ ಕಾರಣವಾಗುತ್ತದೆ ಎಂಬುದು ನಾಟಕದೊಳಗಿನ ನಿರಂತರ ಅನುರಣನಗೊಳ್ಳುವ ದನಿ. ಇದರ ಬದಲಾಗಿ ಲೋಕ ಕಲ್ಯಾಣ ಮತ್ತು ಕಾಡಿನ ರಕ್ಷಣೆಗಾಗಿ ಬಿಲ್ವಿದ್ಯೆ ಎಂಬುದನ್ನು ಒಂದು ಬುಡಕಟ್ಟಿನ ಜೀವಪರ ನಂಬಿಕೆ ಹಾಗೂ ಕ್ಷತ್ರಿಯರ ಜೀವವಿರೋಧಿ ನಂಬಿಕೆ ನಡುವೆ ಇರುವ ವ್ಯತ್ಯಾಸವನ್ನು ಕಾಣಬಹುದಾಗಿದೆ."[೨] ಕೊನೆಯ ದೃಶ್ಯವಂತೂ ಮನುಕುಲದ ಉದ್ಧಾರದ ಮಹತ್ವಪೂರ್ಣವಾದ ನಿಲುವುಗಳನ್ನು ಸ್ಪಷ್ಟಪಡಿಸುತ್ತದೆ. ಕೌರವ ಪಾಂಡವ ಇಬ್ಬರೂ ಕುರುಕ್ಷೇತ್ರ ಯುದ್ಧಕ್ಕೆ ಏಕಲವ್ಯನ ಬೆಂಬಲವನ್ನು ಯಾಚಿಸಿದಾಗ ಆತ ಯಾರಿಗೂ ಬೆಂಬಲ ನೀಡದೆ ತೆಗೆದುಕೊಳ್ಳುವ ನಿರ್ಧಾರ ಸಾಮಾಜಿಕ ನೆಲೆಯಿಂದ ಮಾನವೀಯವಾದುದು. ಇಬ್ಬರ ಕುಟಿಲ ಹಿತಾಸಕ್ತಿಗಳು ಅವನಿಗೆ ಬೇರೆಯಾಗಿ ಕಾಣಿಸಲಿಲ್ಲ. ಬಲಗೈನ ಹೆಬ್ಬೆರಳನ್ನು ಕತ್ತರಿಸಿದ ಗಾಯ ವಾಸಿಯಾಗಿದ್ದರೂ ಹೃದಯದಲ್ಲಾಗ ಗಾಯಕ್ಕೆ ಯುಗಯುಗಾಂತರಗಳ ನೋವಿನ ಎಚ್ಚರವಿದೆ ಎನ್ನುತ್ತಾನೆ.

"ಸ್ವಾರ್ಥವೇ ಮುಖ್ಯವಾಗಿರುವ ಕುರುಕ್ಷೇತ್ರದಲ್ಲಿ ಯಾರೊಬ್ಬರ ದಾಳ ನಾನಾಗಲಾರೆ. ಎಲ್ಲೆಲ್ಲೂ ಇರುವ ಅನ್ಯಾಯದ ವಿರುದ್ಧ ಜ್ಞಾನದ ಗುತ್ತಿಗೆಯನ್ನು ಹಿಡಿದಿರುವ ಶಾಸ್ತ್ರಗಳ ವಿರುದ್ಧ ನನ್ನ ಯುದ್ಧ ಮೇಲು ಕೀಳೆಂಬ ವಂಚನೆಯನ್ನು ಅಳಿಸಲು ನನ್ನ ಸಮರ. ಈ ಸಂಘರ್ಷ ನಿಮ್ಮಿಬ್ಬರ ವಿರುದ್ಧವೂ ಸಾಗುತ್ತದೆ ಆಗ ಮಾತ್ರ ತುಳಿತಕ್ಕೆ ಸಿಕ್ಕವರ ಬಾಳಿಗೆ ಬೆಳಕು ಮೂಡುತ್ತದೆ. ನೊಂದವರ ಬದುಕಿನ ತೋಟದಲ್ಲಿ ಸಮಾನತೆಯ ಹೂವು ಅರಳುತ್ತದೆ"[೩] ಎಂಬ ಏಕಲವ್ಯನ ಆಶಾಭಾವನೆಯ ಮಾತಿನಲ್ಲಿ ಈ ನಾಟಕ ಮುಕ್ತಾಯವಾಗುತ್ತದೆ.

ಕೌರವ ಪಾಂಡವರ ಅಮಾನವೀಯ ಪ್ರಭುತ್ವದ ಸೂತಕದ ಜೊತೆಗೆ ದ್ರೋಣಾಚಾರ್ಯರ ಶಾಸ್ತ್ರ ಸೂತಕದ ಕೊಳೆಯನ್ನು ತೊಳೆದ ಹಾಗೆ ಕಳೆದುಕೊಳ್ಳಬೇಕೆಂಬುದು ಈ ನಾಟಕದ ಸಾಮಾಜಿಕ ಆಶಯ. ಹಾಗಾಗಿ ಈ ಎರಡು ನೆಲದ ಸೂತಕಗಳು ನಿರ್ಮೂಲನ ಯೋಗ್ಯವೆನ್ನುವ ಏಕಲವ್ಯ ಮನುಕುಲದ ಉದಾತ್ತ ಪರಂಪರೆಯ ಪ್ರತಿಪಾದಕನಾಗಿದ್ದಾನೆ. ಈ ನಾಟಕ ಪರಿಸರದ ಪ್ರೀತಿ, ಸಹಜ ಬದುಕಿನ ಹಂಬಲಗಳ ಅನಿವಾರ್ಯತೆಯನ್ನು ತಿಳಿಸುತ್ತಾ ಹಿಂದೂ ಧರ್ಮದ ವಿಧಿವಿಧಾನ ಶಾಸ್ತ್ರಗಳನ್ನು ಪ್ರಭುತ್ವದ ಯುದ್ಧ ಕೋರತನವನ್ನು ನಿರಾಕರಿಸುತ್ತದ್ದಾರಿಂದ ಸಮಕಾಲಿನ ಸಂದರ್ಭದಲ್ಲಿ ಹೆಚ್ಚು ಪ್ರಸ್ತುತವಾಗುತ್ತದೆ.

---

೧. ಸಿದ್ಧಲಿಂಗಯ್ಯ : ಏಕಲವ್ಯ, ಅಂಕಿತ ಪ್ರಕಾಶನ, ಬೆಂಗಳೂರು, ೨೦೦೨, ಪುಟ - ೧
೨. ಡಾ. ಎಸ್. ಚಂದ್ರಕಿರಣ್ : ಅನುಸಂಧಾನ, ತಾರಾ ಪ್ರಕಾಶನ, ಮೈಸೂರು ೨೦೦೬, ಪುಟ - ೪೪
೩. ಸಿದ್ಧಲಿಂಗಯ್ಯ : ಏಕಲವ್ಯ, ಅಂಕಿತ ಪ್ರಕಾಶನ, ಬೆಂಗಳೂರು, ೨೦೦೨, ಪುಟ - ೬೪

ಪ್ರೊ. ಮಾ.ನ. ಜವರಯ್ಯ ಅವರ ನಾಟಕ "ಜಲ" ನಾಲ್ಕು ಅಂಕದ ಹಾಗೂ ಅನೇಕ ದೃಶ್ಯಗಳಳ್ಳ ಒಂದು ಚಾರಿತ್ರಿಕ ನಾಟಕ, ಚಾರಿತ್ರಿಕ ನಾಟಕ ಅನ್ನೋದು ಒಂದು ರೀತಿಯ ಕುತೂಹಲವಾದರೆ ಅದರ ವಸ್ತು ಸನ್ನಿವೇಶಗಳ ನಿರ್ವಹಣೆಯಿಂದಲೂ ಕುತೂಹಲಕರವಾದ ನಾಟಕ ಇದಾಗಿದೆ.

ಪುರೋಹಿತಶಾಹಿ ವ್ಯವಸ್ಥೆ ಬುದ್ಧನ ಬದುಕಿನ ಬಗ್ಗೆ ಇದುವರೆವಿಗೂ ನಿರ್ಮಿಸಿದ್ದ ಕಾಲ್ಪನಿಕ ಭ್ರಮೆಗಳನ್ನು ಒಡೆದು ಚಾರಿತ್ರಿಕ ವಾಸ್ತವತೆಯನ್ನು ನಾಟಕ ಅನಾವರಣಗೊಳಿಸುತ್ತದೆ. ಇಂತಹ ಚಾರಿತ್ರಿಕ ವಿಸ್ಮೃತಿಗೂ ಪುರೋಹಿತಶಾಹಿ ಸೃಷ್ಟಿಸಿದ ಹುಸಿ ಮೌಲ್ಯಗಳ ನಂಬಿಕೆಗೂ ಹಾಗೂ ಕನ್ನಡ ಸಾಹಿತ್ಯದ ಗೊಡ್ಡು ನಂಬಿಕೆಗಳಿಗೆ ಒಂದು ಅಂತರ್ಗತ ಸಂಬಂಧವಿದೆ. ಅರಿವಿನ ಗರ್ಭಕ್ಕೆ ಕತ್ತಲು ಆವರಿಸಿರುವ ಈ ಸಂದರ್ಭದಲ್ಲಿ ಜಲ ನಾಟಕ ಮನುಷ್ಯತ್ವದ ಅನೇಕ ಅರ್ಥಗಳನ್ನು ಅರಿವಿನ ಧ್ಯಾನದಲ್ಲಿ ಬಿಚ್ಚಿಡುತ್ತದೆ.

ಮೇಳಗೀತೆಯ ಮೂಲಕ ನಾಟಕಕಾರರು ಹೇಳುವ ಹಾಗೆ ಮರೆತು ಹೋದ ಕಥೆ, ಬಚ್ಚಿಟ್ಟ ಕಥೆಯಿದು

"ಮಾನವನ, ಮರೆತ ಮಾನವಗ
ಮಾನವತೆಯ ಮಾರ್ಗ ತೋರಿದ
ಮಾನವೋತ್ತಮನ ಕಥೆಯಿದು
ಮರೆಯಲಿನ್ನು ಹಳೆಯ ವ್ಯಥೆಯದು"[೧],

ಎಂದು ಹೇಳುತ್ತಾ ಮರೆತು ಹೋದ ಪರಂಪರೆಯ ಸತ್ಯಶೋಧಕ್ಕೆ ಬಂದು ನಿಂತಿದ್ದೇವೆ ಎನ್ನುತ್ತಾರೆ.

ಸಿದ್ಧಾರ್ಥನನನ್ನು ಶಾಕ್ಯ ಸಂಘದ ಸದಸ್ಯತ್ವಕ್ಕೆ ಸೇರಿಸಿಕೊಳ್ಳುವುದರಿಂದ ಆರಂಭವಾಗುವ ಈ ನಾಟಕ ರೋಹಿಣಿ ನದಿ ಅದಕ್ಕೆ ಸಂಬಂಧಿಸಿದ ಜಲವಿವಾದ - ಶಿಕ್ಷೆ ನಿರ್ಧಾರ - ಗಡಿಪಾರು - ಭಿಕ್ಷೆ ಹೀಗೆ ಬುದ್ಧನ ಬದುಕಿನ ಚಿತ್ರಣಗಳಲ್ಲಿ ತೆರೆದುಕೊಳ್ಳುತ್ತದೆ.

ಬುದ್ಧನ ಕಾಲದ ಭರತ ಖಂಡದಲ್ಲಿ ಪಾರ್ಲಿಮೆಂಟರಿ ಪ್ರಜಾಪ್ರಭುತ್ವ ವ್ಯವಸ್ಥೆ ಅಸ್ತಿತ್ವದಲ್ಲಿದ್ದ ಕಾಲದಲ್ಲೂ ಅದರ ಉಳಿವಿಗೆ ಆದಮ್ಯ ಹೋರಾಟ ಮಾಡಿದ ಕಥೆಯ ನಾಟಕ ಜಲ, ಪ್ರಭುತ್ವ ಹಾಗೂ ಅಧಿಕಾರದ ಸಂಬಂಧಗಳು ಅನೈತಿಕಗೊಂಡಿರೆ ಎಲ್ಲಾ ಉದಾತ್ತ ಮೌಲ್ಯಗಳು ಹೇಗೆ ಬಲಿಯಾಗುತ್ತವೆ ಎಂಬುದನ್ನು ಗತದ ಅನುಸಂಧಾನದ ನೆಲೆಯಲ್ಲಿ ವಿವೇಚಿಸುವಾಗ ಸತ್ಯದ ಶೋಧನೆಯನ್ನು ಕಂಡು ಕೊಳ್ಳುವ ಕೃತಿ ಇದಾಗಿದೆ. ಮಾನವೀಯ ಮೌಲ್ಯಗಳನ್ನು ಪ್ರತಿಪಾದಿಸುವ ಸಾಮಾಜಿಕ ಮೌಲ್ಯಗಳನ್ನು ಎತ್ತಿ ಹಿಡಿಯುವ ಮನುಷ್ಯರಿಗೆ ಈ ಸಾಮಾಜಿಕ ವ್ಯವಸ್ಥೆ ಎಷ್ಟರ ಮಟ್ಟಿಗೆ ದ್ರೋಹ ಬಗೆದಿದೆ ಈ ಕಾರಣಕ್ಕಾಗಿ ಎಂತೆಂತಹ ಹುನ್ನಾರಗಳನ್ನು ಬಳಸಿಕೊಂಡಿದೆ ಎಂಬುದನ್ನು ನಾಟಕ ನಮ್ಮ ಮುಂದಿಡುತ್ತದೆ. "ಉಪಕಾರಿಗೆ ಉಪದ್ರವ ತಪ್ಪಿದ್ದಲ್ಲ ಅನ್ನೋದು ಮಾನವನ ಇತಿಹಾಸ ಆದ್ರೂ ಅವನು ಮಾಡಿದ ಉಪಕಾರ ಮಾತ್ರ ಮಹಾಮಾನವನ ಚರಿತ್ರೆ"[೨]

ಯಾವುದೇ ಸಮಸ್ಯೆಯ ಪರಿಹಾರಕ್ಕೆ ಯುದ್ಧವೊಂದೇ ಅಂತಿಮವಾದ ಪ್ರಯೋಗ ಅಲ್ಲ. ಬದಲಾಗಿ ಮಾನವೀಯ ನೆಲೆಯ ಮಾತುಕತೆ ಒಪ್ಪಂದಗಳು ಯುದ್ಧವನ್ನು ತಪ್ಪಿಸಬಲ್ಲವು. ಆದರಿಂದ ಸಂಭವಿಸುವ ಸಾವು ನೋವುಗಳನ್ನು ನಿವಾರಿಸಿಕೊಳ್ಳಬಲ್ಲವು. ಈ ಮೂಲಕ ನೆಲದ ಮೇಲೆ ಸದಾ ಶಾಂತಿಯನ್ನು ಕಾಪಾಡಿಕೊಳ್ಳಬಹುದಾಗಿದೆ

---

೧. ಮ.ನ. ಜವರಯ್ಯ : ಜಲ, ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು ೧೯೯೯, ಪುಟ - ೧
೨. ಅದೇ ಪುಟ - ೯೬

ಎಂಬುದು ಈ ನಾಟಕದ ಆಶಯ. ಹಾಗೆನೇ, ನದಿ ಹರಿಯೋದು ಅದರ ಪ್ರಾಕೃತಿಕ ನಿಯಮ. ಅದರಂತೆ ನಡೆದುಕೊಳ್ಳುವುದು ಕೂಡ ಮಾನವ ಜನಾಂಗದ ಕರ್ತವ್ಯ. ಈ ಜಲ ಈ ಹುಲುಮನುಷ್ಯನ ಅಧೀನಕ್ಕೆ ಒಳಪಡುವುದು ಯಾವತ್ತಿಗೂ ಸಾಧ್ಯವಿಲ್ಲ ಎಂಬುದನ್ನು ಮನಗಾಣಬೇಕಾಗುತ್ತದೆ. ಜಲ ಜೀವಕಾರುಣ್ಯ ದ್ರವರೂಪ. ಸಕಲ ಜೀವಶಕ್ತಿಯ ಚೇತನ ರೂಪವದು, ಸದಾ ಚಲನಶೀಲವಾಗಿರುವ ಜೀವನದಿ ಲೋಕಕಲ್ಯಾಣಕ್ಕಾಗಿ ಹರಿಯುತ್ತದೆ ವಿನಃ ಸ್ವಾರ್ಥಸಾಧಕರ ಮರ್ಜಿಗಾಗಿ ಅಲ್ಲ. ನಾಟಕದೊಳಗಡೆ ಜಲದ ಚಲನಶೀಲತೆಗೆ ಅದರ ಪಾವಿತ್ರ್ಯತೆಗೆ ಅದರ ಜೀವಸಂಬಂಧಿ ಗುಣಗಳಿಗೆ ಮತ್ತು ಗೌತಮನ ವ್ಯಕ್ತಿತ್ವಕ್ಕೂ ಇರುವ ನೇರ ಸಂಬಂಧದ ಸಾದೃಶ್ಯವನ್ನು ಮರೆಯುವ ಹಾಗೆ ಇಲ್ಲ.

ವಿಪುಲವಾದ ಐತಿಹಾಸಿಕ ಸಾಮಾಗ್ರಿಯಾದ ಈ ನಾಟಕ ಒಳಿತು ಮತ್ತು ಕೆಡುಕಿನ ಸಂಘರ್ಷದ ಹಿನ್ನೆಲೆಯಲ್ಲಿ ರೂಪ ತಾಳಿದೆ ಎಂದು ಮೊದಲೇ ಹೇಳಿದ್ದೇನೆ. "ಕುಟಿಲ ರಾಜಕಾರಣದ ಪ್ರಚಂಡ ಶಕ್ತಿಯ ಎದರಿಗೆ ಎಂತಹ ಮಾನವೀಯ ಕಾರ್ಯಾಚರಣೆಗಳು ತಕ್ಷಣಕ್ಕೆ ಸೋತರು ಕೂಡ ಭವಿಷ್ಯತ್ತಿನಲ್ಲಿ ಉದಾತ್ತ ಆದರ್ಶಗಳು, ಮಹೋನ್ನತ ದರ್ಶನದ ಕಾಣ್ಕೆಗಳು ಮಾವೀಯ ಹಂಬಲಗಳು ಯಾವುದೇ ಒಳಸಂಚನ್ನು ಮೀರಿ ಸಮಾಜದಲ್ಲಿ ತಮ್ಮ ಆಸ್ತಿತ್ವವನ್ನು ಸ್ಥಾಪಿಸುತ್ತವೆ ಎಂಬುದನ್ನು ನೋಡಬಹುದು"[೬] ಈ ನಾಟಕದ ಸಂದರ್ಭದಲ್ಲಿ ಮೇಲಿನ ಮಾತು ಅದಕ್ಕೆ ಒಪ್ಪಿತವಾಗುತ್ತದೆ.

ಚಾರಿತ್ರಿಕ ವಿಸ್ಮೃತಿಯನ್ನು ಜಾಗೃತಗೊಳಿಸುತ್ತ ಐತಿಹಾಸಿಕ ಅಪಕಲ್ಪನೆಗಳನ್ನು ಅಸತ್ಯಗಳನ್ನು ಪ್ರಶ್ನಿಸುತ್ತ ನಿಜದ ಶೋಧನೆಯ ಹಂಬಲದಲ್ಲಿ ಕ್ರಿಯಾಶೀಲವಾದ ಈ ನಾಟಕ ಒಂದು ನೈತಿಕ ಮಾದರಿಯನ್ನು ವೈಚಾರಿಕವಾಗ ಪುನಃ ಪರಿಶೀಲಿಸಲು ನಮ್ಮನ್ನು ಒತ್ತಾಯಿಸುತ್ತದೆ. "ಮೀಮಾಂಸೆಯ ಪ್ರಕಾರ ವೈರಾಗ್ಯವು ಕೂಡ ಒಂದು ಜ್ಞಾನ ಶಾಖೆ. ಮಾನವ ಸ್ವಭಾವದಲ್ಲಿ ವೈರಾಗ್ಯದ ಅಂಶಗಳು ಇರದೆ ಹೋದರೆ ಆತ ಲಂಪಟನಾಗುತ್ತಾನೆ"[೭] ಎಂಬ ಯಶೋಧರೆಯ ಮಾತನ್ನು ಸಧ್ಯದ ಸಾಮಾಜಿಕ ಅಸಮಾನತೆಯ ವಿಕಾರಗಳಲ್ಲಿ ವಿವೇಚಿಸಬಹುದಾಗಿದೆ. ವಸುಮಂಗಳ ಹಬ್ಬದ ಪ್ರಯುಕ್ತ ಕ್ರೀಡಾಕೂಟದ ಚರ್ಚೆ ಬಂದಾಗ ಗೌತಮ ಬೇಟೆಯನ್ನು ತಿರಸ್ಕರಿಸುತ್ತಾನೆ. ಕೇವಲ ಆಟದ ಹೆಸರಿನಲ್ಲಿ ಮನುಷ್ಯನ ಪಾಶವೀ ಗುಣಗಳ ಸಂತೋಷಕ್ಕಾಗಿ ಮಾತಿಲ್ಲದ ಮೂಕ ಪ್ರಾಣಿಗಳು ಪಕ್ಷಿಗಳ ಪ್ರಾಣವನ್ನು ಯಾಕೆ ತೆಗೆಯಬೇಕು ? ಎಂಬ ಗೌತಮನ ಮಾತಿನಲ್ಲಿ ಸರ್ವ ಜೀವಿಗಳ ಮೇಲೆ ದಯೆ, ಜೀವಕಾರುಣ್ಯ ಅಹಿಂಸೆ ಎಲ್ಲದಕ್ಕಿಂತ ಹೆಚ್ಚಾಗಿ ಒಬ್ಬ ರಾಜನ ಮಗನಾಗಿದ್ದರು ಕೂಡ ರೈತಾಪಿ ವರ್ಗದವರೊಂದಿಗೆ ಇದ್ದ ಬದುಕಿನ ಸಂಬಂಧ ನೆಲದ ಬದುಕಿನ ಬಗ್ಗೆ ಅವನಿಗಿದ್ದ ಕಾಳಜಿ ಮಾನವ ಸಂಬಂಧಗಳು ಹೇಗಿರಬೇಕು ಎಂಬ ವಿಚಾರದಲ್ಲಿ ಜೀವ ಸಮೂಹವನ್ನು ಪ್ರೀತಿಸುವ ಆತನ ಮಾತೃಹೃದಯದ ವಾತ್ಸಲ್ಯ ಅಪಾರವಾದುದು.

ಹೀಗೆ ಜಲನಾಟಕ ಮನುಷ್ಯ ಮಾತ್ರರ ಅಕರಾಳ ವಿಕಾರಗಳನ್ನು ಮೀರುತ್ತ ಯುದ್ಧ ಹಾಗೂ ಅವುಗಳ ಹಿಂದಿರುವ ಕ್ಷಾತ್ರ ವೈಭವೀಕರಣದ ಅರ್ಥಹೀನತೆಗಳನ್ನು ಧಿಕ್ಕರಿಸುತ್ತ, ಅವುಗಳ ಹಿಂದಿನ ಎಲ್ಲ ಸ್ವಾರ್ಥಪರ ಕುಟಿಲತೆಗಳನ್ನು ಚಾರಿತ್ರಿಕವಾಗಿ ಕಟಕಟೆಯಲ್ಲಿ ನಿಲ್ಲಿಸುತ್ತದೆ. ಅಷ್ಟೇ ಅಲ್ಲದೆ ಐತಿಹಾಸಿಕವಾಗಿ ಸಮ್ಮತವಲ್ಲದ ಅಪಕಲ್ಪನೆಗಳನ್ನು ದೂರ ಸರಿಸಿ ಬಹುಜನರು ಒಪ್ಪಬಹುದಾದ ಐತಿಹಾಸಿಕ ಸತ್ಯಗಳನ್ನು ಜನರ ಮುಂದಿಡುತ್ತದೆ.

---

೬. ಅರವಿಂದ ಮಾಲಗತ್ತಿ : ದಲಿತ ಮಾರ್ಗ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು - ೨೦೦೨, ಪುಟ - ೩೮೪

೭. ಮ.ನ. ಜವರಯ್ಯ : ಜಲ, ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು ೧೯೯೯, ಪುಟ - ೪೩

ದಲಿತ ಸಾಹಿತ್ಯ ಆಂದೋಲನದ ಒಬ್ಬ ಪ್ರಜ್ಞಾವಂತ ಹಾಗೂ ಸತ್ವಶಾಲಿ ಬರಹಗಾರರಾದ ಪ್ರೊ. ಅರವಿಂದ ಮಾಲಗತ್ತಿ ಅವರು ಇದುವರೆವಿಗೆ 'ಮಸ್ತಕಾಬಿಷೇಕ', 'ಗೋಧಾನ' ಮತ್ತು 'ಜೀತ' ಹಾಗೂ 'ಸಮುದ್ರದೋಳಗಣ ಉಪ್ಪು' ಎಂಬ ನಾಟಕಗಳನ್ನು ರಚಿಸಿದ್ದಾರೆ. 'ಸಮುದ್ರದೊಳಗಣ ಉಪ್ಪು' ಒಂದು ಪ್ರಬುದ್ಧ ನಾಟಕವಾಗಿದ್ದು ಚಿಂತನ ಪ್ರಧಾನವಾದ ವೈಚಾರಿಕ ನೆಲೆಯದ್ದಾಗಿದೆ. ನಾಟಕದ ವಸ್ತು ಮೀಸಲಾತಿಗೆ ಸಂಬಂಧಿಸಿದ್ದು. ಆದರೆ ಈ ಮೀಸಲಾತಿಯ ರಾಜಕೀಯ, ಸಾಮಾಜಿಕ, ಧಾರ್ಮಿಕ, ಕೌಟುಂಬಿಕ, ಶೈಕ್ಷಣಿಕ ಹೀಗೆ ವಿವಿಧ ಆಯಾಮಗಳಲ್ಲಿ ಒಳಗೊಳ್ಳುವಂತೆ ನಿರ್ವಚಿಸಿರುವುದು ಇದರ ಸಾಮಾಜಿಕ ನೆಲೆಯಾಗಿದೆ. ಸಮಾಜ ಮುಖಿಯಾದ ಈ ನಾಟಕದಲ್ಲಿ ಸಮಸ್ಯೆಗಳು ಸಮಾಜಜನ್ಯ ಹಾಗೆಯೇ ಅವುಗಳ ಪರಿಹಾರ ಕ್ಷೇತ್ರವೂ ಕೂಡ ಸಮಾಜವೇ ಆಗಿರುತ್ತದೆ. ಹೀಗಾಗಿ ಇದೊಂದು ಸಮಸ್ಯೆ ಪ್ರಧಾನ ನಾಟಕವೇ ಹೊರತು ಪಾತ್ರ ಪ್ರಧಾನ ನಾಟಕ ಅಲ್ಲ.

ಸ್ವಾತಂತ್ರ್ಯದ ತರುವಾಯ ದಲಿತ ಸಮುದಾಯಕ್ಕೆ ಸಂಬಂಧಿಸಿದ ಬಹುಪಾಲು ಸಮಸ್ಯೆಗಳನ್ನು ಚರ್ಚೆ ಮಾಡುತ್ತ ಅದಕ್ಕೆ ಹಿನ್ನೆಲೆಯಾದ ಹಾಗೆ ಅನೇಕ ವಿಚಾರಗಳನ್ನು ಮಂಡಿಸುತ್ತದೆ. ಸದ್ಯದ ಎಡಬಲಗಳ ತಳಮಳಗಳ ಸನ್ನಿವೇಶಗಳನ್ನು ಮುಖಾಮುಖಿಗೊಲಿಸುತ್ತ ಸಾಗುತ್ತಲೇ ಅಂತರ್ಜಾತಿಯ ಮದುವೆಯ ಬಗ್ಗೆ ರಾಜಕಾರಣ ಮತ್ತು ರಾಜಕೀಯ ಪಕ್ಷಗಳ ಬಗ್ಗೆ, ದಲಿತ ನಾಟಕರು ಹಾಗೂ ಸಂಘಟನೆಯ ಬಗ್ಗೆ ಒಂದು ಸಮಗ್ರವಾದ ವಿವರಗಳನ್ನು ಸಾಮಾಜಿಕ ನೆಲೆಯಲ್ಲಿ ನೀಡುತ್ತದೆ. ಈ ಕಾರಣಕ್ಕಾಗಿ ನಾಟಕದಲ್ಲಿ ಚಾರಿತ್ರಿಕ ದಾಖಲಾತಿಯ ಕೆಲಸವೂ ಆಗಿರುವುದನ್ನು ಮನಗಾಣಬಹುದಾಗಿದೆ.

ನಾಟಕದ ಏಳನೇ ದೃಶ್ಯವಂತೂ ಸ್ವತಂತ್ರ ಭಾರತದಲ್ಲಿ ಬಾಬಾ ಸಾಹೇಬರ ಆಶಯಗಳನ್ನು ಮಣ್ಣುಗೂಡಿಸಿದ ಇಲ್ಲಿನ ಸಾಮಾಜಿಕ ವ್ಯವಸ್ಥೆಯ ಅನಾವರಣ ಇದೆ. ಅಸ್ಪೃಶ್ಯತೆ ಆಚರಣೆಯನ್ನು ಅವರ ಅನೇಕ ಆಚರಣಾ ವಿಧಾನಗಳನ್ನು ಅತ್ಯಂತ ಸೂಕ್ಷ್ಮವಾಗಿ ಹೇಳುತ್ತಾ ಬಂದ ನಾಟಕ ಈ ದೃಶ್ಯದಲ್ಲಿ ಅದರ ಆಚರಣೆಯ ದಟ್ಟತೆಯ ವಿರಾಟ್ ಸ್ವರೂಪವನ್ನು ನಮ್ಮ ಮುಂದಿಡುತ್ತದೆ. ಜೊತೆಗೆ ದಲಿತನೊಬ್ಬನ ಅನುಭವದ ತಿಳುವಳಿಕೆ ಜ್ಞಾನಪೀಠ ಪ್ರಶಸ್ತಿಗೂ ಮಿಗಿಲಾದುದು ಎಂಬುದನ್ನು ಅಪರಿಚಿತ ಮತ್ತು ಅಜ್ಜನ ಸಂಭಾಷಣೆಯ ಮೂಲಕ ಪ್ರತಿಪಾದಿಸುತ್ತದೆ.

"ಅಜ್ಜಾ ನಿನಗೆ ಜ್ಞಾನಪೀಠ ಪ್ರಶಸ್ತಿ ಕೊಡಬೇಕು ನೋಡಜ್ಜ ಎಂದಾಗ ಅಜ್ಜ ಹೇಳುವ ಮಾತು ನಾವೆಲ್ಲ ಅನಕ್ಷರಸ್ತರು, ಅನಾಗರಿಕರು ಕನಪ್ಪಾ ನಮಗೆಲ್ಲಿಂದ ಬತ್ತೈತಿ ಗ್ಯಾನ ಯಾರಿಗೆ ಬೇಕು ನಿನ್ನ ಗ್ಯಾನಪೀಠ ಪ್ರಶಸ್ತಿ ಇದ್ರೆ ಒಂದು ಜೊತೆ ಎಕ್ಕಇಡ ಕೊಡು"[೮] ಎಂಬ ಮಾತಿನಲ್ಲಿ ಒಂದು ಸಂಸ್ಕೃತಿಯ ಮೌಲ್ಯಗಳನ್ನು ಅಪಮೌಲ್ಯಗೊಳಿಸಿ ನಿಜಬದಕಿನ ಮೌಲ್ಯಗಳನ್ನು ಎತ್ತಿ ಹಿಡಿಯುತ್ತದೆ. ಹೀಗೆಯೇ ನಾಟಕ ದಲಿತರ ಹೋರಾಟ ಅಂದ್ರೆ ನೂರೊಂದು ಸ್ವಾತಂತ್ರ್ಯ ಹೋರಾಟಕ್ಕೂ ಮಿಗಿಲಾದುದು"[೯] ಎಂದು ಹೇಳುತ್ತಾ ಮೀಸಲಾತಿ ವಿಚಾರದಲ್ಲಿ ಅಖಂಡತ್ವ ಸ್ಥಾಪನೆ ಆಗಬೇಕೆಂದು ಪ್ರತಿಪಾದಿಸುತ್ತದೆ. ಓದಿಕೊಂಡ ದಲಿತರು ನೌಕರಶಾಹಿಯ ಗುಲಾಮರಾಗಿದ್ದಾರೆ. ದಲಿತರ ಮನಸ್ಸುಗಳು ಒಡೆದು ಹೋಗಿವೆ. ಇದುವರೆವಿಗೆ ಸ್ವತಂತ್ರ ಭಾರತದಲ್ಲಿನ ಬಾಬಾಸಾಹೇಬರ ಹೋರಾಟದ ಫಲವಾಗಿ ದಲಿತ ಸಮುದಾಯದ ಮೊದಲ ಹಾಗೂ ಎರಡನೆಯ ತಲೆಮಾರು ಪಡೆದುಕೊಂಡಿರುವ

೮. ಅರವಿಂದ ಮಾಲಗತ್ತಿ : ಸಮುದ್ರದೊಳಗಣ ಉಪ್ಪು, ವಿಚಾರವಾದಿ ಪ್ರಕಾಶನ, ಮೈಸೂರು ೧೯೯೮, ಪುಟ - ೬೪

೯. ಅದೇ ಪುಟ - ೭೦

ವಿದ್ಯೆ ಉದ್ಯೋಗ, ಅಧಿಕಾರ, ಸಂಘಟನಾ ಶಕ್ತಿ ಈಗ ಮತ್ತೊಮ್ಮೆ "ಒಂದು ಸರಿಯಾದ ಕ್ರಮಕ್ಕೆ" ಸಾಗಬೇಕಾಗಿದೆ. ಹೀಗಾಗಿ ಇದು ಆತ್ಮ ವಿಮರ್ಶೆಯ ಕಾಲದಲ್ಲಿ ಅಂತರ್ ವಿವೇಚನೆ ಮಾಡಿಕೊಂಡು ದಲಿತರು ನಿಜವಾದ ಸಾಮಾಜಿಕ ಸತ್ಯವನ್ನು ಅರಿಯಲು ಈ ನಾಟಕ ಒತ್ತಾಯಿಸುತ್ತದೆ ಮತ್ತು ಸಮಾಜ ಚಿಂತಿಸಬೇಕಾದ ದಿಕ್ಕನ್ನು ಕೂಡ ತೋರಿಸುತ್ತದೆ.

ಚಾರಿತ್ರಿಕ ಒಳನೋಟಗಳನ್ನು ಸದ್ಯದ ಸಾಂಸ್ಕೃತಿಕ ಹಾಗೂ ಸಾಮಾಜಿಕ ವಾಸ್ತವದಲ್ಲಿ ಬಾಬಾಸಾಹೇಬರ ನಿಲುವು ಮತ್ತು ವ್ಯಕ್ತಿತ್ವವನ್ನು ಅನಾವರಣಗೊಳಿಸುವ ಡಾ. ಎಲ್. ಹನುಮಂತಯ್ಯ ಅವರ ನಾಟಕ **"ಅಂಬೇಡ್ಕರ್"**.

ಬಾಬಾಸಾಹೇಬರು ತಮ್ಮ ದುಃಖತಪ್ತ ಅಸಾಹಯಕ ಶೋಷಿತ ದಲಿತ ಸಮುದಾಯವನ್ನು ಶೋಷಣೆಯಿಂದ ಮುಕ್ತಗೊಳಿಸಬೇಕಾದ ಸಂದರ್ಭದಲ್ಲಿ ಪಟ್ಟ ತಳಮಳ, ಗಾಂಧೀಜಿಯೊಂದಿಗೆ ಅವರ ಸಂಘರ್ಷ ಹಾಗೂ ತಾತ್ತ್ವಿಕ ಸೋಲು ಹೀಗೆಬಾಬಾಸಾಹೇಬರ ಮಾನವೀಯ ವ್ಯಕ್ತಿತ್ವದ ಸೂಕ್ಷ್ಮತೆಗಳನ್ನು ನಾಟಕ ದಾಖಲಿಸುತ್ತದೆ. ಜಾಗತಿಕ ಸಂದರ್ಭದ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಕ್ಷೇತ್ರದಲ್ಲಿ ಬಹುದೊಡ್ಡ ಹೋರಾಟಗಾರರಾಗಿ ಮೂಡಿಬಂದ ಬಾಬಾಸಾಹೇಬರ ಅಂತರಂಗದಲ್ಲಿ ನೋವಿನ ಕುದಿತದೊಂದಿಗೆ, ಅದೊಂದು ಕರುಣೆಯ ಪ್ರೀತಿಯ ಕಡಲು ಎಂಬುದನ್ನು ತೋರಿಸುತ್ತಾರೆ. ಗಾಂಧಿ ಮಾತ್ರ ಸಂತ ಅಲ್ಲ ಬಾಬಾಸಾಹೇಬರು ಕೂಡ ಮನುಕುಲ ಮರೆಯಲಾಗದ ಸಂತರೆಂಬುದನ್ನು ಆಪ್ತ ಚಿತ್ರಣದೊಂದಿಗೆ ನಾಟಕ ನಿರ್ವಚಿಸುತ್ತದೆ.

ಇಡೀ ನಾಟಕ ಬದುಕನ್ನು ಕಳೆದುಕೊಂಡ ಜನರ ವಿಮೋಚನೆಗಾಗಿ ಬಾಬಾಸಾಹೇಬರು ಜನಾಂಗದ ವಿಮೋಚನೆಗಾಗಿ ಪಟ್ಟ ಶ್ರಮ, ಇಟ್ಟ ದಿಟ್ಟ ಹೆಜ್ಜೆ, ಎದುರಿಸಿದ ಸವಾಲು, ಸಂದಿಗ್ಧತೆಯ ಜೊತೆಗೆ ಈ ಭಾರತೀಯ ಸಮಾಜ ಅವರಿಗೆ ನೀಡಿದ ನೋವನ್ನು ದಾಖಲಿಸುತ್ತ ಅವರ ಘನ ವ್ಯಕ್ತಿತ್ವದ ನಿಲುವಿನ ಪ್ರಸ್ತುತತೆಯನ್ನು ಸಾಮಾಜಿಕ ನೆಲೆಯನ್ನು ಅಧಿಕೃತಗೊಳಿಸುತ್ತದೆ.

ದಲಿತ ನಾಟಕಗಳಲ್ಲಿ ದಾಖಲಿಸಲೇಬೇಕಾದ ಮತ್ತೊಂದು ಹೆಸರು ಜಾಜಿ ಮಲ್ಲಿಗೆಯ ಕವಿಯೆಂದೆ ಹೆಸರಾದ ಸತ್ಯಾನಂದ ಪಾತ್ರೋಟ ಅವರದು. ಇದುವರೆವಿಗೆ **'ನಮಗೆ ಯಾರೂ ಇಲ್ಲೋ ಎಪ್ಪಾಸಾಕ್ಷಿ'** **'ಮತ್ತೊಬ್ಬ ಏಕಲವ್ಯ'**. ಮತ್ತು **'ಹ್ಯಾದವರು'** ಎಂಬ ಮೂರು ನಾಟಕಗಳನ್ನು ರಚಿಸಿದ್ದಾರೆ.

"ನಮಗೆ ಯಾರೂ ಇಲ್ಲೋ ಎಪ್ಪಾ ಸಾಕ್ಷಿ" ಎಂಬ ನಾಟಕ ಕೃತಿಯ ವಸ್ತು ಸರಿಯಾದ ಸಾಕ್ಷಿ ಇಲ್ಲದ್ದಕ್ಕೆ ನ್ಯಾಯ ದೊರಕದೆ ಅನ್ಯಾಯಕ್ಕೆ ಒಳಗಾದವರ ಬದುಕಿನ ಚಿತ್ರಣ ಈ ನೆಲದ ನ್ಯಾಯಪದ್ಧತಿಗಳು ಅನುಸರಿಸುತ್ತಿರುವ ಅನ್ಯಾಯದ ಮಾರ್ಗಗಳನ್ನು ಅನಾವರಣಗೊಳಿಸುತ್ತ ಉಚ್ಚೀ ಕುಡದವರ ಇಚ್ಛಿ ನ್ಯಾಯವೆಂದು ನ್ಯಾಯ ಪದ್ಧತಿಯನ್ನು ಅಣಕಿಸುತ್ತದೆ. ಊರ ಗೌಡನ ಮಗನಾದ ವೀರಗೌಡ ತಾನು ಮಾಡಿದ ಕಳ್ಳತನದ ಹೊರೆಯನ್ನು ಮಾದನ ಮೇಲೆ ಹಾಕುತ್ತಾನೆ. ಈ ಕಾರಣಕ್ಕಾಗಿ ಮೂರು ಹಂತದ ವಿಚಾರಣೆಯ ಪ್ರಸಂಗಗಳಲ್ಲಿ ನ್ಯಾಯ ತೀರ್ಮಾನವಾಗುತ್ತದೆ. ಮೊದಲನೆಯದು ಊರ ಗೌಡನ ಸಮ್ಮುಖದಲ್ಲಿ, ಎರಡನೆಯದು ಪಡದಯ್ಯನ ಮಠದ ಆವರಣದಲ್ಲಿ, ಮೂರನೆಯದು ನ್ಯಾಯಾಲಯದಲ್ಲಿ ನಡೆಯುತ್ತದೆ.

ನಾಟಕಕಾರರು ತುಂಬಾ ಸಾಂಕೇತಿಕವಾಗಿ ಭಾರತದಂಥ ರೋಗಗ್ರಸ್ಥ ಸಾಮಾಜಿಕ ವ್ಯವಸ್ಥೆಯಲ್ಲಿ ನ್ಯಾಯತೀರ್ಮಾನಗಳು ಫ್ಯೂಡಲ್ ವ್ಯವಸ್ಥೆಯೊಳಗಿನ ನ್ಯಾಯ ತೀರ್ಮಾನ, ಧಾರ್ಮಿಕ ದಬ್ಬಾಳಿಕೆಯಲ್ಲಿ

ನ್ಯಾಯ ತೀರ್ಮಾನ, ಹಾಗೆಯೇ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲೂ ಕೂಡ ವಸ್ತುನಿಷ್ಠವಾದ ಪ್ರಾಮಾಣಿಕ ನ್ಯಾಯ ದೊರಕಲಾರದ ಸ್ಥಿತಿಗೆ ತಲುಪಿರುವುದನ್ನು ದಂಡಕ್ಕೆ ಗುರಿಯಾದ ಮಾದನ ಮೂಲಕ ವ್ಯಂಗ್ಯಿಸುತ್ತಾರೆ. ಇದಕ್ಕೆಲ್ಲ ಕಾರಣವೇನೆಂದರೆ ಯಾರು ನಿಜವಾದ ಅಪರಾಧಿಯೋ ಅಂಥವರೇ ನ್ಯಾಯಸ್ಥರಾಗಿರುವುದರಿಂದ ನ್ಯಾಯಪಂಚಾಯ್ತಿಗಳು ಕಲುಷಿತಗೊಂಡಿರುವಂಥದ್ದು ಈ ದೇಶದ ದುರಂತವಾಗಿದೆ. ನಾಟಕದಲ್ಲಿ ಕೊನೆಯಲ್ಲಿ ಬರುವ ಮೇಳದ ಹಾಡು ನಮ್ಮ ಸಾಮಾಜಿಕ ವಿಪರ್ಯಾಸ ಬದುಕಿನ ಚರಮ ಗೀತೆಯಾಗಿ ಅನ್ಯಾಯಾದ ಬದುಕಿಗೆ ಅಣಕವಾಗಿ ನಿಂತಿದೆ.

"ಕೋರ್ಟು ಕಛೇರಿ ರೊಕ್ಕದ ಮ್ಯಾಲೆ
ತೀರ್ಪುಗೀರ್ಪು ಸಾಕ್ಷಿ ಮೇಲೆ
ಎರಡೂ ಇಲ್ಲದ ಬಡವಗ ಸಾಕ್ಷಿ
ಹೇಳುವರ್ಯಾರು ಸಿಗಲಿಲ್ಲೋ ಎಪ್ಪಾ ಸಿಗಲಿಲ್ಲೋ"[೧೦]

ಈ ನಾಟಕದ ಮತ್ತೊಂದು ಮಗ್ಗುಲು ಧಾರ್ಮಿಕ ವ್ಯವಸ್ಥೆಯ ಅವಹೇಳನ ಹಾಗೂ ಆರ್ಥಿಕ ಅಸಾಮಾನ್ಯತೆಯನ್ನು ವಿಡಂಬಿಸುವುದು. ದೇವರ ಅಸ್ತಿತ್ವವನ್ನು ಪ್ರಶ್ನಿಸುವ ಈ ನಾಟಕ ಭಾರತೀಯ ಬೌದ್ಧಿಕ ದಿವಾಳಿತನವನ್ನು ಕೂಡ ಜಾಲಾಡುತ್ತದೆ. "ಈ ದೇಶದಾಗ ಎಲ್ಲದಕ್ಕೂ ಬರ ಬೀಳತೈತಿ, ಅದರ ದೇವರಿಗೆ ಜಾತಿಗಿ ಬರಾ ಬೀಳೂದಿಲ್ಲ. ದಿವಸs, ಹೊತ್ತು ಹೊಂಟ್ರ ಸೆಕೆಂಡಿಗೆ ಸಾವಿರ ಜಾತಿ, ಜಾತಿಗೊಂದು ದೇವರು ಹುಟ್ಟಾನ ಎಂಬ ಮಾತು ಜಾತ ಮತ್ತು ದೇವರುಗಳ ನಿರರ್ಥಕತೆಯನ್ನು ಧ್ವನಿಸುತ್ತದೆ. ಇವುಗಳನ್ನು ಸುಲಿಗೆಯ ಸಾಧನವನ್ನಾಗಿ ಮಾಡಿಕೊಂಡ ಪುರೋಹಿತಶಾಹಿಯ ವಿರುದ್ಧ ಕೆಂಡ ಕಾರಲಾಗಿದೆ. ಹಾಗೇನೆ ದಿನಪೂರ್ತಿ ದುಡಿದರೂ ಫಲಮಾತ್ರ ಅದೇ ಹಸಿವು ಅಪಮಾನ ಎಂಬುವುದನ್ನು "ಹಗಲು ಹನ್ನಾಡ ತಾಸ ಮ್ಯಾಗ ಸೂರ್ಯನ ಜೋಡಿ ಕೆಳಗೆ ಕೆಂಡಕಾರೋ ಭೂಮಿ ಜೊತೆ ಕುಸ್ತಿ ಹಿಡಿದು ಮುತ್ತು ರತ್ನ ಬೆಲೆದರೆ, ಸಿಗೋದು ಕಸಕಡ್ಡಿ ತುಂಬಿದ ಯಾಡಸೇರ ಜ್ವಾಳ"[೧೧] ಎಂಬ ಮಾದ ಸ್ವಗತದ ಮಾತು ನಮ್ಮ ಸಮಾಜದ ಆಳು ಒಡೆಯರ ನಡುವಿನ ಕಂದಕವನ್ನು ತೋರಿಸುತ್ತ, ಆರ್ಥಿಕ ಅಸಮಾನತೆಯನ್ನು ಎತ್ತಿ ತೋರಿಸುತ್ತದೆ. ಹೀಗೆ ಪಾತ್ರೋಟ ಅವರನಾಟಕಗಳು ಜ್ವಲಂತ ಸಾಮಾಜಕ ಸಮಸ್ಯೆಗಳನ್ನು ಕೇಂದ್ರವಾಗಿಟ್ಟುಕೊಂಡು ವ್ಯವಸ್ಥೆಯ ದೌರ್ಜನ್ಯಕ್ಕೆ ಸಿಕ್ಕಿ ತೊಳಲಾಡುವವರ ಬದುಕನ್ನು ಮತ್ತು ಮನುಷ್ಯ ಸಂಬಂಧಗಳ ಮೇಲೆ ಅತ್ಯಾಚಾರ ಎಸಗುತ್ತಲೇ ಬಂದ ಸಾಮಾಜಿಕ ವ್ಯವಸ್ಥೆಯನ್ನು ಒಟ್ಟೊಟ್ಟಿಗೆ ದಾಖಲಿಸುತ್ತಾ ಸಾಗುತ್ತವೆ.

ಹೀಗೆ ಕನ್ನಡ ಸಾಹಿತ್ಯದಲ್ಲಿ ದಲಿತ ನಾಟಕಗಳಿಗೆ ವಿಶೇಷ ಸ್ಥಾನವಿದ್ದು ಅವು ಮಾನವನ ಮಾನವೀಯ ನೆಲೆಯನ್ನು ಪರಿಶೀಲಿಸುತ್ತಾ, ನೈತಿಕ ಅಧಃ ಪತನವನ್ನು ವಿವರಿಸುತ್ತಾ ಸಮಾಜದ ಒಳಗದಿಗಳನ್ನು ಹಾಗೂ ಅಲ್ಲಿನ ಸಂಬಂಧದ ಸ್ವರೂಪವನ್ನು ಚಿತ್ರಿಸುತ್ತವೆ.

---

೧೦. ಸತ್ಯಾನಂದ ಪಾತ್ರೋಟ : ನಮಗ ಯಾರು ಇಲ್ಲೋ ಅಪ್ಪಾಸಾಕ್ಷಿ, ಅಕ್ಷರ ಪ್ರಕಾಶನ ಸಾಗರ ೨೦೦೧, ಪುಟ - ೧೬
೧೧. ಅದೇ ಪುಟ - ೩೮

## ದಲಿತ ಆತ್ಮ ಕಥೆಗಳು

ಆತ್ಮ ಕಥೆಯು 'ಆತ್ಮ ಚರಿತ್ರೆ' ಎಂಬ ಹೆಸರಿನಲ್ಲಿ ನಮಗೆ ಪರಿಚಯವಾಗಿಯೇ ಇದೆ. ನಾಡಿನ ಹಲವು ಗಣ್ಯ ವ್ಯಕ್ತಿಗಳ ಆತ್ಮ ಚರಿತ್ರೆಗಳು ನಮ್ಮ ಕಣ್ಣ ಮುಂದಿದೆ. ಈ ಆತ್ಮ ಚರಿತ್ರೆಗಳಲ್ಲಿ ಯಂಥಾ ಪ್ರಕಾರ ಆಯಾ ಲೇಖಕರ ವೈಯಕ್ತಿಕ ಬದುಕು ಪ್ರಪಂಚಿಕವಾಗಿದೆ. ಸಾಂದರ್ಭಿಕವಾಗಿ ಸಮಕಾಲೀನ ಸಮಾಜದ ಕೆಲವು ಚಿತ್ರಗಳು ಮೂಡಿ ಬಂದಿದೆ. ಒಟ್ಟಾರೆಯಾಗಿ ಇವು ಪ್ರತಿಷ್ಠಿತ ವ್ಯಕ್ತಿ ಮತ್ತು ಸಮಾಜದ ಚಿತ್ರಣ ಬದಗಿಸುತ್ತದೆ. ಆದರೆ ದಲಿತ ಆತ್ಮ ಕಥೆಗಳು ಇವುಗಳಿಗಿಂತ ಭಿನ್ನವಾಗಿವೆ. ಒಂದೇ ಊರಿನಲ್ಲಿ ಬದುಕುತ್ತಿದ್ದರೂ ಕಲಿತ ಕೇರಿಯ ಬದುಕನ್ನು ಕತ್ತಲು ನೋವು, ಅಪಮಾನ ಅಸಮಾನತೆ ಬಡತನಗಳೆ ಮೊದಲಾದ ಭಯಂಕರ ಸಮಸ್ಯೆಗಳು ಏಕೆ ಆವರಿಸಿವೆ ಎಂಬ ಪ್ರಶ್ನೆಗಳೇ ದಲಿತ ಆತ್ಮ ಕತೆಗಳ ರಚನೆಯ ಹಿಂದಿರುವ ಮುಖ್ಯ ಪ್ರೇರಣೆಗಳಾಗಿವೆ. ಈ ಹಿನ್ನೆಲೆಯಲ್ಲಿ ದಲಿತ ಆತ್ಮಕತೆಗಳು ಹಿಂದಿನ ಗಣ್ಯರ ಆತ್ಮ ಚರಿತ್ರೆಗಳಿಗಿಂತ ಭಿನ್ನವಾಗಿವೆ. ಅಷ್ಟು ಮಾತ್ರವಲ್ಲ ಇದುವರಗಿನ ಇತಿಹಾಸ ಸಾಹಿತ್ಯ ಮತ್ತು ಸಾಂಸ್ಕೃತಿಕ ದಾಖಲೆಗಳಿಗೆ ಇವು ಮುನ್ನುಡಿಯುತ್ತವೆ. ಮತ್ತು ಇತಿಹಾಸದಲ್ಲಿ ಸೇರ್ಪಡೆಯಾಗದ ಮಹತ್ವದ ಸಂಗತಿಗಳನ್ನು ದಲಿತ ಆತ್ಮಕಥೆಗಳು ತಮ್ಮಲ್ಲಿ ಗರ್ಭೀಕರಿಸಿ ಕೊಂಡಿಯೆ "ಇಡೀ ಭಾರತೀಯ ಸಾಹಿತ್ಯವು ಒಂದು ತುದಿಯಾದರೆ ದಲಿತ ಆತ್ಮ ಕಥೆಗಳು ಆ ಸಾಹಿತ್ಯದ ಮತ್ತೊಂದು ತುದಿಯಾಗಿ ನಿಲ್ಲುತ್ತದೆ."[೧] ಇದುವರೆಗೆ ಅಜ್ಞಾತವಾಗಿ ಉಳಿದಿದ್ದ ದಲಿತ ಸಮುದಾಯಗಳ ಬದುಕು ತನ್ನ ನೈಜ ವಿವರಗಳೊಂದಿಗೆ ಆತ್ಮ ಕಥೆಗಳ ರೂಪದಲ್ಲಿ ದಾಖಲಾಗಿದೆ.

ದಲಿತ ಆತ್ಮಕಥೆಗಳು ಮೊದಲು ಬೆಳಕಿಗೆ ಬಂದದ್ದು ಮರಾಠಿ ದಲಿತ ಸಾಹಿತ್ಯದಲ್ಲಿ ಅವು ಸಾಮಾಜಿಕ ನ್ಯಾಯದ ಹಿನ್ನೆಲೆಯಲ್ಲಿ ರೂಪುಗೊಂಡವು. ಮನಸ್ಸಿಗೆ ನಡುಕ ಹುಟ್ಟಿಸುವ ಅನುಭವಗಳ ಅಮೂರ್ತ ಬದುಕು ಅನಾವರಣಗೊಂಡಿತು. ತಾವು ತಮ್ಮ ಸಮುದಾಯ ಅನುಭವಿಸಿದ ಘೋರ ನೋವು ಅಸಮಾನಗಳನ್ನು ದಲಿತ ಆತ್ಮ ಕಥನಕಾರರು ಇಲ್ಲಿ ದಾಖಲಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಬಾಲ ಚಂದ್ರಫಡಕೆ ಅವರು ದಲಿತ ಆತ್ಮ ಕಥೆಗಳನ್ನು "ನೋವಿನ ಕಥೆಗಳು"[೨] ಎಂದು ಕರೆಯುವುದು ಔಚಿತ್ಯ ಪೂರ್ಣವಾಗಿದೆ. ತಮ್ಮ ಜೀವನದ ಆಗು ಹೋಗುಗಳ ಮೇಲೆ ಸುತ್ತಲಿನ ಪರಿಸರ ಮತ್ತು ಸಾಂಪ್ರದಾಯಿಕ ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆ ವಿವಿಧ ಪರಿಣಾಮ ಬೀರಿವೆ ಎಂದು ಹೇಳುವುದು ಇವುಗಳ ತುರ್ತಾದ ತುಡಿತವಾಗಿದೆ. "ನನ್ನ ಮೇಲೆ ಇಂಥ ನಿಕೃಷ್ಟ ಜೀವನವು ಅದೇಕೆ ಹೇರಲ್ಪಟ್ಟಿತು ? ಎಂದು ಹೇಳುವುದಕ್ಕಾಯೇ ದಲಿತ ಲೇಖಕ ಆತ್ಮಕತೆ ಬರೆಯುತ್ತದ್ದಾನೆ. ಆತನ ಮೇಲೆ ಬಲವಂತವಾಗಿ ಹೇರಲ್ಪಟ್ಟ ಜೀವನ ಕೇವಲ ಆತನಿಗೋ ಸೀಮಿತವಾದುದ್ದಲ್ಲ. ಅದು ಬರೀ ದಲಿತ ಸಮಾಜದ ಮೇಲೆ ಹೇರಲ್ಪಟ್ಟುದ್ದಾಗಿದೆ ಆದ್ದರಿಂದಲೇ ದಲಿತ ಆತ್ಮ ಕಥೆಗಳು ದಲಿತ ಸಮಾಜದ ಆತ್ಮ ಕಥೆಗಳೇ ಆಗಿವೆ"[೩] ಎಂಬ ಜನಾರ್ಧನ ವಾಘಮಾರೆ ಅಭಿಪ್ರಾಯ ಆತ್ಮಕಥೆಗಳ ಉದ್ದೇಶ ಮತ್ತು ವ್ಯಾಪ್ತಿಯನ್ನು ಸ್ಪಷ್ಟಪಡಿಸುತ್ತದೆ.

ಕನ್ನಡ ದಲಿತ ಆತ್ಮ ಕಥೆಗಳಿಗೆ ಮರಾಠಿ ದಲಿತ ಆತ್ಮ ಕಥೆಗಳು ಮುಖ್ಯ ಪ್ರೇರಣೆಯಾಗಿಸಿವೆ. ಮರಾಠಿಯ ಶರಣ ಕುಮಾರ ಲಿಂಬಾಳೆ ಅವರ 'ಅಕ್ಕ ಮಾಶಿ'ಯನ್ನು ದು.ನಿಂ. ಬೆಳಗಲಿ 'ಅಕ್ರಮ ಸಂತಾನ' ಎಂಬ ಹೆಸರಿನಲ್ಲಿ ಅನುವಾದಿಸಿದರು (೧೯೯೩) ಹಾಗೆಯೇ ೧೯೯೪ ರಲ್ಲಿ ಲಕ್ಷ್ಮಣ್ ಗಾಯಕ್‌ವಾಡ್ ಅವ

---

೧. ಪುರುಷೋತ್ತಮ ಬಿಳಿಮಲೆ : ಬಂಡಾಯ - ದಲಿತ ಸಾಹಿತ್ಯ ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು ೨೦೦೫, ಪುಟ - ೮೦
೨. ಉದ್ಧೃತ : ಸರಜೂ ಕಾಟ್ಕರ್ - ಕನ್ನಡ ಮರಾಠಿ ದಲಿತ ಸಾಹಿತ್ಯ ೨೦೦೩, ಪುಟ - ೧೮೧
೩. ಅದೇ ಪುಟ - ೧೮೩

'ಉಚಲ್ಯಾ'ವನ್ನು ಚಂದ್ರಕಾಂತ ಪೋಕಳೆ ಅನುವಾದಿಸಿದರು. ಮಹರಾಷ್ಟ್ರದ ಸಾಹಿತ್ಯದಲ್ಲಿ ಒಂದು ಹೊಸ ಅಲೆ ಎಬ್ಬಿಸಿದ ದಲಿತ ಆತ್ಮಕಥೆಗಳ ಪರಿಣಾಮ ನೆರೆಯ ರಾಜ್ಯವಾದ ಕರ್ನಾಟಕಕ್ಕೆ ಬಹುಬೇಗ ತಲುಪಿರುವ ಸಾಧ್ಯತೆಯಿದೆ. ಕನ್ನಡದಲ್ಲಿ ಈ ಬಗೆಯ ರಚನೆಗಳ ಕೊರತೆಯಿದೆ ಎಂಬುದನ್ನು ಸಾಧ್ಯತೆಯಿದೆ. ಕನ್ನಡಲ್ಲಿ ಈ ಬಗೆಯ ರಚನೆಗಳ ಕೊರತೆಯಿದೆ ಎಂಬುದನ್ನು ಡಾ. ಗಿರಡ್ಡಿ ಗೋವಿಂದರಾಜ ಅವರು ಗುರುತಿಸುತ್ತಾ ನಮ್ಮ ದಲಿತ ಲೇಖಕರಿಗೆ ಇಂಥ ದಾರುಣ ಅನುಭವಗಳು ಇಲ್ಲವೇ ? ಅವುಗಳನ್ನು ಹೇಳಿಕೊಡರೆ ತಮ್ಮ ಪ್ರತಿಷ್ಠೆಗೆ ಕುಂದಾದಿತೆಂಬ ಭಯವೇ ? ಅವರಲ್ಲಿ ಸಿಟ್ಟೇನೂ ಸಾಕಷ್ಟಿದೆ. ಆದರೆ ಆ ಸಿಟ್ಟಿನ ಕಾರಣ ಸಾಮಾನ್ಯೀಕರಿಸಿದ್ದೆ ಹೊರತು ವೈಯಕ್ತಿಕ ಅನುಭವದಲ್ಲಿ ಕುದ್ದು ಗಟ್ಟಿಯಾದುದಲ್ಲ ಅವರು ತಮ್ಮ ಸಿಟ್ಟಿನ ಅಬಿವ್ಯಕ್ತಿಗಾಗಿ ಇನ್ನೂ ಸಾಂಪ್ರದಾಯಕ ಸಾಹಿತ್ಯ ಪ್ರಕಾರದಲ್ಲಿಯೇ ಹುಡುಕಾಡುತ್ತಿದ್ದಾರೆ. ಮರಾಠಿ ದಲಿತ ಲೇಖಕರಂತೆ ತಮ್ಮ ವಿಶಿಷ್ಟ ನೋವಿನ ಅಬಿವ್ಯಕ್ತಿಗಾಗಿ ವಿಶಿಷ್ಯ ಸಾಹಿತ್ಯ ಪ್ರಕಾರವನ್ನು ರಪಿಸಿಕೊಳ್ಳಲು ಯತ್ನಿಸುವುದಿಲ್ಲ"[೪] ಎಂಬ ಪ್ರಶ್ನೆ ಎತ್ತಿದರು. ಪ್ರಜಾವಾಣಿಯಲ್ಲಿ ಬಂದ ಈ ಚರ್ಚೆ ಅರವಿಂದ ಮೂಲಗತ್ತಿ ಅವರಿಗೆ ಅವರ ಆತ್ಮಕಥೆ ಬರೆಯಲು ಪ್ರೇರಣೆ ಒದಗಿಸಿದು.

ಅರವಿಂದ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ' ಕನ್ನಡಲ್ಲಿ ಬಂದ ಮೊದಲ ಆತ್ಮಕಥೆ. ಇದು ೧೯೯೪ ರಲ್ಲಿ ಪ್ರಕಟವಾಗಿ ಸಹೃದಯ ಓದುಗರ ಮತ್ತು ವಿಮರ್ಶಕರ ಗಮನ ಸೆಳೆಯಿತು. ಮತ್ತು ಮುಂದಿನ ಆತ್ಮಕಥೆಗಳ ರಚನೆಗೆ ಚಾಲನೆ ನೀಡಿತು ಅನಂತರದಲ್ಲಿ ಸಿದ್ದಲಿಂಗಯ್ಯ ಅವರ 'ಊರು ಕೇರಿ' (೧೯೯೭) ತುಂಬಾಡಿ ರಾಮಯ್ಯನವರ ಮಣೆಗಾರ (೧೯೯೯) ಕೆ. ಗೋವಿಂದರಾಜ ಅವರ 'ಮನವಿಲ್ಲದವರಮಧ್ಯೆ (೨೦೦೦) ಮತ್ತು ಕತ್ತಾಲೆ ಬೆಳದಿಂಗಳೊಳಗೆ (೨೦೦೨) ಪ್ರಕಟವಾದುವು. ಇವುಗಳಲ್ಲಿ ನಾನು 'ಗೌರ್ನಮೆಂಟ್ ಬ್ರಾಹ್ಮಣ' ಊರುಕೇರ ಮತ್ತು 'ಮಣಿಗಾರ'ವನ್ನು ವಿವರಿಸಲು ತೆಗೆದುಕೊಂಡಿದ್ದೇನೆ.

ಕನ್ನಡ ಸಾಹಿತ್ಯದಲ್ಲಿ ನಡೆಯುತ್ತಿರುವ ಸಂಸ್ಕೃತಿ ಸಾಮಾಜಿಕ ವಿವೇಚನೆಯಲ್ಲಿ ಅನೇಕ ಚಿಂತನೆ ಗೀಡುಮಾಡುವಷ್ಟು 'ಗೌರ್ಮೆಂಟ್ ಬ್ರಾಹ್ಮಣ' ಕೃತಿಯ ಸಮರ್ಥವಾಗಿದೆ. ಈ ಆತ್ಮಕಥನದಲ್ಲಿ ಲೇಖಕರ ಬಾಲ್ಯ ಜೀವನ, ಶಾಲೆ ಕಾಲೇಜು ಕಲಿಯುವಾಗಿನ ದಿನಗಳಿಂದ ಹಿಡಿದು ನೌಕರಿ ಹಿಡಿವವರೆಗಿನ ಅನುಭವಗಳು ಮಾತ್ರ ದಾಖಲಾಗಿವೆ. ಈ ಕುರಿತು ಮಾಲಗತ್ತಿಯವರೇ ಹೇಳುವಂತೆ ಆತ್ಮಕಥೆ ಬರೆಯುವುದು ನನ್ನ ಚಿಕ್ಕವಯಸ್ಸಿಗೆ ಬೇಕೆ ಎನ್ನುವ ಪ್ರಶ್ನೆ ನನ್ನನ್ನು ಕಾಡಿದೆ. ಏಕೆಂದರೆ ಕನ್ನಡ ಸಾಹಿತ್ಯದಲ್ಲಿ ಆತ್ಮಕಥೆಯನ್ನು ಬರೆಯುವುದು ಸಾಮಾನ್ಯವಾಗಿ ಕೂದಲು ನೆರೆತು ತಲೆ ಅಲುಗಾಡುವಾಗ, ಅನುಭವಗಳನ್ನು ಹೇಳಿಕೊಳ್ಳಬೇಕಾದರೆ ಕೂಲು ನೆರೆಯುವ ವರಗೆ ಕಾಯಬೇಕೆ ? ಕಾಯುವುದಾದರೆ ಯಾವ ಕಾರಣಕ್ಕಾಗಿ? ಇನ್ನಷ್ಟು ಅನುಭವಗಳು ಸಂಗ್ರಹವಾಗಲಿ ಎಂದೆ ? ಅಥವಾ ಅಪಕ್ವ ವಯಸ್ಸು ಎಂದು ನಿರಾಕರಿಸುವುದೇ? ಇಲ್ಲವೇ ಎಲ್ಲವೂ ಏಕಕಾಲಕ್ಕೆ ಬರೆಯಬಹುದು ಎನ್ನುವ ವಿಚಾರವೇ ? ಇಂಥ ಹಲವಾರು ಪ್ರಶ್ನೆಗಳು ನನ್ನೆದುರು ಕುಣಿದಿವೆ. ಅನುಭವಗಳನ್ನು ಹೇಳಿಕೊಳ್ಳಲು ಕೂದಲು ನೆರೆಯಬೇಕಿಲ್ಲ. ಬಾಯೊಳಗಿನ ಹಲ್ಲುಗಳು ಉದುರಬೇಕಿಲ್ಲ ಬದುಕಿನ ವಾಸ್ತವ ಸಂಗತಿಗಳನ್ನು ಯಥಾವತ್ತಾಗಿ ಕೊಡುವುದು ಎಂದೆರ ಬದುಕಿರುವಾಗಲೇ ಜನತೆಯ ಬಾಯಿಗೆ ಎಲೆ ಅಡಿಕೆ ಯಾಗುವುದು ಎಂದರ್ಥ."[೫]

---

೪. ಉದ್ಧೃತ : ಸರುಜ ಕಾಟ್ಕರ್ - ಕನ್ನಡ ಮರಾಠಿ ದಲಿತ ಸಾಹಿತ್ಯ ೨೦೦೩, ಪುಟ - ೨೦೧

೫. ಅರವಿಂದ ಮಾಲಗತ್ತಿ : ಗೌಮೆಂಟ್ ಬ್ರಾಹ್ಮಣ, ಅಕ್ಷರ ಪ್ರಕಾಶನ ಸಾಗರ ೧೯೯೪, ಪುಟ - ।

ಮಾಲಗತ್ತಿಯವರು ತಮ್ಮ ಜೀವನದಲ್ಲಿ ಅನುಭವಿಸಿದ ಬಡತನ, ಅಸ್ಪೃಶ್ಯತೆ, ನೋವು - ನಲಿವುಗಳ ಕಠೋರ ಅನುಭವಗಳನ್ನು ಬಿಚ್ಚಿ ಹೇಳಿದ್ದಾರೆ. ಇದು ಅವರೊಬ್ಬರ ಬಾಳಿನ ಕಥೆಯಲ್ಲಿ ಇಡೀ ಒಂದು ಸಮುದಾಯವೇ ಪಟ್ಟ ಅಪಮಾನದ ಸಮಾಜ ಒಂದರ ಅವಮಾನವೀಯತೆ, ಕ್ರೌರ್ಯಗಳ ಕಥನವೇ ಆಗಿದೆ. ಒಂದು ದಿನದ ಹಸಿವಿನ ಬವಣೆ ತೀರಿಸಲು ಮೇಲ್ವರ್ಗದ ಹೆಣದ ಮೇಲಿನ ದುಡ್ಡು ಸಹಯಾವಾಗುತ್ತದೆ ಎಂದರೆ ಅಲ್ಲಿನ ಬಡತನದ ಭೀಕರತೆ ಎಂಥದ್ದು ಎಂಬುದರ  ಅರಿವಾಗುತ್ತದೆ. 'ಮಾಲಗತ್ತಿ' ಎಂಬ ಹೆಸರು ಕರೆಯಲೂ ಅಸಹ್ಯ ಪಡುವ ಮೇಲ್ವರ್ಗದವರ ಒಳಗೇ ಬದುಕಿ ತನ್ನ ಹೆಸರು ಸರಿಪಡಿಸಲು ಹೋಗಿ ಹೊಡೆತ ತಿನ್ನುವ ಲೇಖಕರು ದಲಿತ ಲೋಕದ ಶೋಷಣೆಯ ಒಂದೊಂದು ಮುಖವನ್ನು ವಿನಮ್ರವಾಗಿ ಪರಿಚಯಿಸುತ್ತಾರೆ. ಎಲ್ಲೂ ಆವೇಗ - ಆವೇಶಕ್ಕೆ ಬೆಳಗಾಗುವುದಿಲ್ಲ. ದಲಿತ ಕೇರಿಯ ಪ್ರಾಣಿಗಳನ್ನು ಅಸ್ಪೃಶ್ಯತೆಯಿಂದಲೇ ಕಾಣುವ ಸಮಾಜ ಆ ಪ್ರಾಣಿಗಳ ಸಹಜ ಲೈಂಗಿಕತೆಯನ್ನು ಸಹಿಸದ ಮೌಢ್ಯ ಸಂಪ್ರದಾಯವಾದಿ ಜನರ ಮಧ್ಯೆ ಜೀವಿಸುವ ಕಪ್ಪು ವರ್ಣಿಯ ವ್ಯಕ್ತಿಯನ್ನು ಮುಂದೆ ಅದೇ ಸಮಾಜದ ವ್ಯಕ್ತಿಗಳು ಜಾತಿಗೋತ್ರದ್ದೂ ನಮ್ಮವನೆಂದು ರಾಘವೇಂದ್ರ ಮಠದೊಳಗೆ ನಡೆಯುವ ಹಲ್ಲೆಯಿಂದ ರಕ್ಷಿಸುತ್ತಾರೆ. ಹಾಗೂ ಜಾತಿಯಿಂದ ದಲಿತನೆಂದೂ ತಿಳಿದೂ ಗಾಢವಾಗಿ ಪ್ರೇಮಿಸುವ ಬ್ರಾಹ್ಮಣ ಹೆಣ್ಣು ; ಇವರ ಬಗ್ಗೆ ಬರೆಯುವ ಮಾಲಗತ್ತಿ ಅವರು ಪೂವಾಗ್ರಹ ಪೀಡಿತರಾಗದೆ ಸಮಾಜದ ವ್ಯವಸ್ಥೆಯುಳ್ಳ ಇರುವ ಏರು ಪೇರುಗಳನ್ನು ಚಿತ್ರಿಸುವಲ್ಲಿ ಸಫಲರಾಗಿದ್ದಾರೆ.

ಗಾರ್ಮೆಂಟ್ ಬ್ರಾಹ್ಮಣರ 'ಬೆದೆಗೆ ಬಿದ್ದ ಎಮ್ಮೆ ಓಡಿ ಬಂದ ಕೋಣ', 'ಹಂಡ್ಯಾನ ಲಾಳಿ ಕತ್ತರಿಸಿದ ಪ್ರಸಂಗ,' 'ಮಾಜಿ ಪ್ರೇಯಿಸಿ', ದಲಿತ ಬರೆದದ್ದೆ ಎನ್ನುವ ಕಾರಣಕ್ಕಾಗಿ ಮಠದಲ್ಲಿದ್ದ ರಾಘವೇಂದ್ರನ ಪಠವನ್ನು ಅಲ್ಲಿಂದ ತೆಗೆದು ಹಾಕುವ ಪ್ರಸಂಗಗಳು ಸಂವೇಧನೆ ಶೀಲತೆಯುಳ್ಳ ಯಾರನ್ನಾದರೂ ಬೆಚ್ಚಿ ಬೀಳಿಸುವಂತಿವೆ. ತಮ್ಮ ಹಿಡಿತದಲ್ಲಿರುವ ಕೋಣ, ನಾಯಿಗಳನ್ನು ಶೂದ್ರರ ಎಷ್ಟು ನಾಯಿಗಳೊಂದಿಗೆ ಅವುಗಳ ಲೈಂಗಿಕ ಹಸಿವು ತೀರಿಸಿಕೊಳ್ಳಲು ಬಿಡದ ಸವರ್ಣೀಯ ವ್ಯಕ್ತಿಗಳ ಸಂಕುಚಿತ ಸ್ವಭಾವ ಮತ್ತು ಅಸ್ಪೃಶ್ಯತೆಯ ಆಚರಣೆ ಲೇಖಕರನ್ನು ಮೂಕನ್ಮಿತರನ್ನಾಗಿ ಮಾಡಿದೆ. "ಸೃಷ್ಟಿಯ ಜೀವಿಗಳಿಗೂ ಸಹಜವಾಗಿ ಸೇರಲು ಅವಕಾಶಕೂಡದ ಈ ಸಮಾಜ ಪರಸ್ಪರ ಜನರನ್ನೂ, ಪ್ರೇಮಿಗಳನ್ನೂ ಸೇರಲು ಹೇಗೆ ತಾನೆ ಅವಕಾಶಕೊಟ್ಟಿತು"[೬] ಎನ್ನುವಲ್ಲಿ ಅಸಹಾಯಕತೆಯಿದೆ  ನೋವಿದೆ.

ಈ ಕೃತಿಯಲ್ಲಿ ಲೇಖಕರು ವೈಯಕ್ತಿಕ ಜೀವನದ ಜೊತೆಯಲ್ಲಿಯೇ ತನ್ನ ಗೆಳೆಯರ ಜೀವನವನ್ನು ಪರಿಚಯಿಸುತ್ತಾರೆ. ಅಲ್ಲಿ ಕಮ್ಯುನಿಷ್ಟ್ ಆದರೂ ಜಾತಿ ವಿಚಾರ ಮಾತನಾಡುವವರು, ಔತಣಕ್ಕೆ ಹೋದರೇ ದಲಿತನೆಂದು ಹಂಗಿಸುವವರೂ ಇದ್ದಾರೆ. ಜೊತೆಗೆ ದಲಿತ ಪ್ರತಿಭೆಯನ್ನು ಆರಂಭದಲ್ಲಿಯೇ ಚಿವುಟುವ ಕಾಲೇಜು ಪ್ರಾಧ್ಯಾಪಕರ ಕ್ರೂರ ನಡಾವಳಿಗಳೂ ಚಿತ್ರವಾಗಿದೆ. ಹಾಗೆಯೇ ಇಲ್ಲಿ "ಮೈದೆಳೆದು ನಿಲ್ಲುವ ಮಾಲಗತ್ತಿ ಅವರ 'ಆಯಿ' (ಅಜ್ಜಿ)ಯ ಜಾಣತನ, ಜಿಗುಟುತನ, ತಾಯ್ತನ, ಸಾಹಸಗಳಿಂದ ಈ ಆಯಿ ಅತ್ಯಂತ ಅದ್ಭುತ ಚೈತನ್ಯ ಶೀಲ ವ್ಯಕ್ತಿಯಾಗಿ ಬೆಳೆದು ಕೃತಿಯಲ್ಲಿ ನಿಲ್ಲುತ್ತಾಳೆ. ಓದುಗರ ಮನಸ್ಸಿನಲ್ಲಿ ಗಟ್ಟಿಯಾಗಿ ನಿಂತುಬಿಡುವ ಈ ಪಾತ್ರವು ದೇವನೂರರ ಒಡಲಾಳದ ಸಾಕವ್ವನಂತೆ. ಮಾಲಗತ್ತಿ ತಮ್ಮ ಆತ್ಮಕಥೆಯನ್ನು

೬. ಅರವಿಂದ ಮಾಲಗತ್ತಿ : ಗೌಮೆಂಟ್ ಬ್ರಾಹ್ಮಣ, ಅಕ್ಷರ ಪ್ರಕಾಶನ ಸಾಗರ ೧೯೯೪, ಪುಟ - ೧೫

ಸದಾಕಾಲ ಮೊಮ್ಮಕ್ಕಳನ್ನು ಹಿಂಡುಕಟ್ಟಿಕೊಂಡು ಬೆಳೆಸಿದ 'ಆಯಿ'ಯ ನೆನಪಿಗೆ ಅರ್ಪಿಸಿರುವುದನ್ನು ಸಹಜವಾಗಿದೆ"[೭] ಉಳಿದಂತೆ ಲೇಖಕರು ತಮ್ಮ ಬಾಳಿನಲ್ಲಿನ ಕಾಲೇಜು ದಿನಗಳು ಅಲ್ಲಿ ಶಿಕ್ಷಣ ಪಡೆಯುವ ವ್ಯವಸ್ಥೆಯೊಳಗೆ ಪ್ರಜ್ಞಾವಂತ ದಲಿತರ ಬಾಳಿನಲ್ಲಿ ಎದುರಾಗುವ ತಲ್ಲಣ ಮಯ ಪ್ರಸಂಗಗಳನ್ನು ಬರೆಯುತ್ತಾ ಹೋಗಿದ್ದಾರೆ. ವೇದನೆ ತುಂಬಿದ ಬದುಕಿನ ವಿಮರ್ಶೆ ಮಾಡುತ್ತಾ ಕೆಲವೊಮ್ಮೆ ಆಕ್ರೋಶವಿದ್ದರೂ ಸಹಿಸಿಕೊಳ್ಳುತ್ತಾ ಸಮಾಜದ ಬಳಿಗೆ ಬದುಕುವುದನ್ನು ಕಲಿಯುವುದು ಹೇಗೆಂದು ತೋರಿಸಿದ್ದಾರೆ. ಒಟ್ಟಾರೆ 'ಗೌರ್ಮೆಂಟ್ ಬ್ರಾಹ್ಮಣ'ದ ಎಲ್ಲಾ ಭಾಗಗಳೂ ಕುತೂಹಲದಿಂದ ಓದಿಸಿ ಕೊಂಡು ಸಹೃದಯರಿಗೆ ವಿಶಿಷ್ಟ ಅನುಭವ ನೀಡುವ ಕಲಾಕೃತಿಯಾಗಿ ಹೊರಹೊಮ್ಮಿದೆ.

ಸಿದ್ದಲಿಂಗಯ್ಯನವರ 'ಊರುಕೇರಿ' ೧೯೯೭ ರಲ್ಲಿ ಬಂದ ಆತ್ಮ ಕಥೆಯಾಗಿದೆ. ಇಲ್ಲಿ ಅವರು ತಮ್ಮ ಬಾಲ್ಯದ ಅನುಭವಗಳಿಂದ ಕಾಲೇಜು ಸೇರಿ ನೌಕರಿ ಸೇರುವವರೆಗಿನ ಚಿತ್ರಸಿವಿದೆ. ಒಂದೊಂದು ಪ್ರಸಂಗಗಳೂ ಒಂದೊಂದು ಸಣ್ಣ ಕಥೆಯಂತೆ ಓದಿಸಿಕೊಳ್ಳುತ್ತದೆ. ಈ ಕೃತಿಯು ಒಬ್ಬ ವ್ಯಕ್ತಿಯ ಆತ್ಮ ಕಥೆಯಾಗದೆ ಇಡೀ ದಲಿತ ಸಮುದಾಯದ ಜೀವನ ಚಿತ್ರಣವಿದೆ. ಆ ದಿನಗಳಲ್ಲಿ ದಲಿತರ ದುಸ್ತರ ಬದುಕಿನ ಅಂಗಾಂಗಗಳನ್ನು ಅನಾವರಣಮಾಡಿದೆ. ಮೇಲ್ವರ್ಗದ ಜಮಿನ್ದಾರ ಹೊಲದಲ್ಲಿ ದನದ ರೀತಿ ನೊಗಕ್ಕೆ ಹೆಗಲು ಕೊಟ್ಟು ಉಳುವ ದಲಿತನ ಸ್ಥಿತಿ ನೋಡಿದರೆ ಸಮಾಜದಲ್ಲಿ ನೆಲೆಗೊಂಡಿರುವ ಮಾನವೀಯ ಮೌಲ್ಯಗಳಿಗಾದರೂ ಬೆಲೆ ಇಲ್ಲವೆ ಎಂಬ ಪ್ರಶ್ನೆ ಕಾಡುತ್ತದೆ. ಬ್ರಾಹ್ಮಣರ ಮನೆಯ ತಂಗಳು ಅನ್ನಕಾಗಿ ಸಾಲಾಗಿ ನಿಲ್ಲುವ ದಲಿತರ ಬದುಕಿನ ಸ್ಥಿತಿ, ಅವರು ನಂಬುವ ಮೂಡನಂಬಿಕೆಯುಗಳಿಂದ ಅವರೇ ಶೋಷಣೆಗೆ ಬೆಳೆಗುವ ಶೋಚನೀಯ ಸ್ಥಿತಿಯನ್ನು 'ಊರು ಕೇರಿ' ಚಿತ್ರಿಸುತ್ತದೆ.

ಒಬ್ಬ ದಲಿತ ವಿದ್ಯಾರ್ಥಿ ಹೋರಾಟಗಾರ, ಪ್ರತಿಭಾವಂತ, ವಿಚಾರ ಮತನಾಗ ರೂಪಗೊಂಡ ಬಗೆ, ಈ ನಡುವಿನ ಜೀವನದಲ್ಲುಂಟಾದ ತಲ್ಲಣಗಳು, ಬೆಂಗಳೂರಿನ ಶ್ರೀರಾಂಪುರದ ರೌಡಿಗಳ ರಾದ್ಧಾಂತ ಇವೆಲ್ಲಾ ಕಣ್ಣಿಗೆ ಕಟ್ಟುವಂತೆ ಮೂಡಿವೆ. ಜೊತೆಗೆ ಅನೇಕ ವಿಚಾರವಾದಿಗಳ ಪರಿಚಯವೂ ಆಗುತ್ತದೆ. "ದೇವರು ಸತ್ತ" ಪುಸ್ತಕದ ಖ್ಯಾತಿಯ 'ವಸುದೇವ ಭೂಫಲಂ' ಅವರ ಪ್ರಾಣಭಯ, ಬಸಲಿಂಗಪ್ಪನವರ ಬೂಸಾ ಪ್ರಸರಣ, ದಲಿತ ಸಂಘರ್ಷ ಸಮಿತಿಯೊಳಗಿನ ನಂಟು, ಇವೆಲ್ಲದುದರ ಜೊತೆಗೆ ದಲಿತ ಚಳವಳಿ, ಪ್ರತಿಭಟನೆಗಳನ್ನೂ ಪಡಿಮೂಡಿಸಲಾಗಿದೆ. ಒಟ್ಟಾರೆ, 'ಊರುಕೇರಿ'ಯಲ್ಲಿ ದಲಿತ ಕವಿ ಸಿದ್ದಲಿಂಗಯ್ಯ ರೂಪುಗೊಂಡ ಬಗೆ ಹಾಗೂ ಆತನ ಸಮುದಾಯದ ಜೀವನದ ಜೀವಂತ ಚಿತ್ರಣವಿದೆ. ಸಿದ್ದಲಿಂಗಯ್ಯ ಅವರ ಆರಂಭದ ಕವನಗಳಲ್ಲಿನ ಆಕ್ರೋಶ, ಆವೇಗ, ಪ್ರತಿಭಟನೆ ಎಲ್ಲೂ ವ್ಯಕ್ತವಾಗುವುದಿಲ್ಲ. ಸೌಮ್ಯವಾದ ರಚನೆ, ಸರಳ ಭಾಷೆಯ ಮೂಲಕ ಓದುಗರನ್ನು ಆಕರ್ಷಿಸುತ್ತದೆ.

ದಲಿತ ಆತ್ಮಕಥನಗಳಲ್ಲಿ ಮತ್ತೊಂದು ಪ್ರಮುಖವಾದ ಹೆಸರು ತುಂಬಾಡಿ ರಾಮಯ್ಯ ನವರ '**ಮಣೆಗಾರ.**' ಇದು ತುಮಕೂರು ಜಿಲ್ಲೆಯ ಕೊರಟಗೆರೆ ತಾಲ್ಲೂಕಿನ ತಂಬಾಡಿಗೊಲ್ಲಹಳ್ಳಿಗೆ ಸೇರಿದ ರಾಮಯ್ಯನವರ ಮೊದಲ ಕೃತಿಯಾಗಿದೆ. ತಮ್ಮ ಬಾಲ್ಯ, ಬಡತನ, ದಲಿತ ಸಂಘರ್ಷ ಸಮಿತಿಯ ಸದಸ್ಯರಾಗಿ ನಡೆಸಿದ ಹೋರಾಟ, ಸಾಧನೆ, ವೈಫಲ್ಯ, ತಮ್ಮ ಜೀವನದಲ್ಲಿ ಬಂದು ಹೋದ ಗೊಲ್ಲರ ಹುಲಿಯಪ್ಪ, ಕುರುಬರ ದಾಸಪ್ಪ, ತಳವಾರರ ನಾಗರಪ್ಪ, ನವರಂಥವರ ಪರಿಚಯದ ದಾಖಲೆಗಳಿವೆ. ಇದನ್ನನ್ನು ನೋಡುತ್ತಿದ್ದರೆ ರಾಮಯ್ಯವನರ ಮಾಗಿದ ಮನಸ್ಸು ಪ್ರಬುದ್ಧ ಚಿಂತನೆಗಳು ಅವರು ನಡೆದು ಬಂದ ಹಾದಿಯ ಚಿತ್ರಣ ನೀಡುತ್ತದೆ.

---

೭. ಅರವಿಂದ ಮಾಲಗತ್ತಿ : ದಲಿತ ಮಾರ್ಗ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨, ಪುಟ - ೩೯೨

ರಾಮಯ್ಯನವರು ಸರಳ ಸ್ವಬಾವದ ಸಂಕೋಚದ ವ್ಯಕ್ತಿ "ಅವರ ಆತ್ಮಕತೆಯು ತುಂಬಾ ವ್ಯಕ್ತಿ ಚಿತ್ರಗಳಿವೆ. ತಾನು ಭೇಟಿಯಾದ, ಮುಖಾಮುಖಿಯಾದ ವ್ಯಕ್ತಿಗಳ, ಸನ್ನಿವೇಶಗಳ ಮೂಲಕವೇ ಅವರು ತಮ್ಮನ್ನು ತೆರೆದಿಡುತ್ತಾರೆ. ಹೀಗಾಗಿ ರಾಮಯ್ಯನವರ ಆತ್ಮಕತೆ, ತುಂಬಾಡಿಯ ಆತ್ಮಕತೆಯೂ ಒಂದು ಕಾಲದ ಕತೆಯೂ ಆಗಿಬಿಡುತ್ತದೆ. ಇದೇ ಕಾರಣಕ್ಕೆ ಆಪ್ತರಾಗುತ್ತಾರೆ. ಹೇಳಿಕೇಳಿ ತುಂಬಾಡಿ ರಾಮಯ್ಯನವರು ಎಲ್ಲರಿಗೂ ಚಿರಪರಿಚಿತರಲ್ಲ ಒಬ್ಬ ಜನಪ್ರಿಯ ವಿವಾದಾತ್ಮಕ ವ್ಯಕ್ತಿ ಬರೆಯುವ ಆತ್ಮಕತೆಗಳೂ, ಮರೆಯಲ್ಲಿಯೇ ಉಳಿದ ಸಂಕೋಚ ಸ್ವಭಾವದ ರಾಮಯ್ಯರಂಥವರು ಬರೆಯುವ ಆತ್ಮ ಕಥೆಗಳಿಗೂ ಇರುವ ವ್ಯತ್ಯಾಸವಿದು."[೮]

ಮಣೆಗಾರರ ಬದುಕನ್ನು ಯಥಾವತ್ತಾಗಿ ಚಿತ್ರಿಸುತ್ತಾ, ತಾವು ದಲಿತ ಸಂಘರ್ಷ ಸಮಿತಿಯಲ್ಲಿ ಕಾರ್ಯಕರ್ತನಾಗಿ ಸಾಧಿಸಿದ ಸಫಲತೆ ವಿಫಲತೆಗಳನ್ನು ಚಿತ್ರಿಸುತ್ತಾ, ಇಡೀ ತುಂಬಾಡಿಯ ದಲಿತರ ಜೀವನವನ್ನು ಅಲ್ಲಿನ ಸಂಸ್ಕೃತಿಯನ್ನು ಸ್ಪಷ್ಟವಾಗಿ ವಿವರಿಸುತ್ತಾರೆ. ಮೊದಲನೇ ಭಾಗದಲ್ಲಿ ಅವರ ಬಾಲ್ಯ, ಶಾಲಾ ಕಾಲೇಜು ದಿನಗಳ ಅನುಭವ ಮತ್ತು ಎರಡನೇ ಭಾಗದಲ್ಲಿ ದಲಿತ ಸಂಘರ್ಷ ಸಮಿತಿಯ ಜೊತೆ ಮತ್ತು ಇತರೆ ಪ್ರಗತಿಪರ ಸಂಘಟನೆಗಳ ಜೊತೆಯ ಸಂಬಂಧ ಹಾಗೂ ತಾವು ಸಾಧಿಸಿದ ಕಾರ್ಯ ವೈಕರಿಯ ಚಿತ್ರಣ ನೀಡುತ್ತಾರೆ.

ರಾಮಯ್ಯನವರು ಅನುಸರಿಸಿರುವ ಬರವಣಿಗೆಯ ಶೈಲಿ ಪ್ರಬುದ್ಧ ಗದ್ಯ ಶೈಲಿಯಾಗಿದೆ. "ಸುಮಾರು ಹದಿನೈದು ಇಪ್ಪತ್ತು ವರ್ಷಗಳ ಹಿಂದಿನ ಮಾತು ಒಂದು ಬೇಸಗೆಯ ದಿನ ಕೊರಟಗೆರೆಯ ಸಂತೆ ಮೈದಾನದಲ್ಲಿ ನನ್ನ ಅಮ್ಮ ಮತ್ತು ತಮ್ಮನ ವಿಷಯಕ್ಕಾಗಿ ರೇಗಾಡುತ್ತಾ ನಿಂತಿದ್ದೆ. ಅಷ್ಟರಲ್ಲಿ ನನ್ನ ಬುಜದ ಮೇಲೆ ಯಾರೋ ಕೈ ಇಟ್ಟಂತಾಯಿತು. ಹಿಂದಿರುಗಿ ನೋಡಿದೆ ನಮ್ಮೂರ ಗೊಲ್ಲರ ಹುಲಿಯಪ್ಪ ಕೈಯಲ್ಲಿ ಎಳನೀರು ಹಿಡಿದು ನನಗೆ ಕೊಟ್ಟು ಮಿಗುವಷ್ಟು ಮುಗುಳುನಗೆಯನ್ನು ಸುಸುತ್ತಾ ನಿಂತಿದ್ದರು."[೯] ಈ ರೀತಿಯ ಹುರುಪಾದ ಕೆಲವು ಮಾತುಗಳು ತನ್ನನ್ನು ಪ್ರೀತಿಯಿಂದ ಕಂಡ ಸಮಾಜದೆಡೆಗೆ ಕೃತಿಜ್ಞತೆಯಿಂದ ನೋಡುವ, ತನಗೆ ನೆರವಾದವರನ್ನು ಪ್ರೀತಿಯಿಂದ ಸ್ಮರಿಸುವ, ಅವಮಾನವನ್ನು ನುಂಗಿಕೊಂಡು ಮಗುಳ್ನಗುವ ಎಲ್ಲಾ ಸೌಜನ್ಯ ಮೀರದ ನಡವಳಿಕೆ ರಾಮಯ್ಯನವರ ಆತ್ಮ ಕಥನ, ಇತ್ತೀಚಿಗೆ ಬಂದ ಗದ್ಯ ಬರಹಗಳಲ್ಲಿ ಅತ್ಯುತ್ತಮವಾದುದರ ಸಾಲಿಗೆ ಸೇರಬಲ್ಲದು. ಇದು ಕೇವಲ ರಾಮಯ್ಯನವರ ಆತ್ಮಕಥನವಲ್ಲ. ತುಂಬಾಡಿ ಗೊಲ್ಲಳ್ಳಿಯ ಕಥನ, ತುಮಕೂರಿನ ಕಥೆಯಾಗಿದೆ.

ದಲಿತರನ್ನು ಕಂಡರೆ ತೋಣಚಿಹತ್ತದ ಹಸು ಎಗರಾಡುವಂತೆ ಎಗರಾಡುವ ಜೈನರ ಪ್ರಸಂಗ, ದೇವಸ್ಥಾನದ ಪ್ರವೇಶ ನಿಷೇದದ ಪ್ರಸಂಗ, ಮಣೆಗಾರರಿಗೆ ಮತ್ತು ಹೊಲೆಯರಿಗೆ ಪ್ರತ್ಯೇಕ ಭಾವಿಗಳಿರುವ ಸಂದರ್ಭ, ಹೊಲೆಯರ ಹೆಂಗಸರು ಮಣೆಗಾರರ ಹಟ್ಟಿಗೆ ಕೂಲಿ ಆಳುಗಳನ್ನು ಕರೆಯಲು ಬರುವಾಗ ಕೆಂಡದ ಮೇಲೆ ನಡೆದು ಬರುವಂತೆ ಮಡಿಮೈಲಗೆಯ ಭಾವದಿಂದ ಬಂದು ಹೋಗುತ್ತಿದ್ದರೆನ್ನುವ ಸನ್ನಿವೇಶಗಳು ಮಣೆಗಾರದಲ್ಲಿ ಸೂಕ್ಷ್ಮವಾಗಿ ಚಿತ್ರಿತವಾಗಿದೆ.

ಹೀಗೆ ದಲಿತ ಆತ್ಮಕಥೆಗಳು ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ತಮ್ಮದೇ ಆದ ವಿಶಿಷ್ಟ ಚಾಪುಮೂಡಿಸಿದ್ದು ಅಸ್ಪೃಶ್ಯತೆಯ ಘೋರ ಅನುಭವ, ಭೀಕರವಾದ ಬಡತನದ ಕಹಿ, ಪರಾವಲಂಬನೆಯಿಂದ ಬಂದ ಹಾಸ್ಯ, ವ್ಯವಸ್ಥೆಯ ಅಟ್ಟಹಾಸ, ದಲಿತರ ಬದುಕನ್ನು ನುಂಗಿ ನೀರು ಕುಡಿಯುತ್ತಿರುವ ಮೌಢ್ಯ, ಸ್ವಾತಂತ್ರ್ಯ ನಂತರ ಬಂದ ಶೈಕ್ಷಣಿಕ ಸವಲತ್ತುಗಳಿಂದಾದ ಅನಾನುಕೂಲತೆ, ತಮ್ಮ ಮೇಲಿನ ದೌರ್ಜನ್ಯವನ್ನು ಎದುರಿಸಲು ದಲಿತರು ನಡೆಸಬೇಕಾಗಿ ಬಂದ ಹೋರಾಟ ಇತ್ಯಾದಿ ವಿಷಯಗಳು ಈ ಆತ್ಮಕತೆಗಳ ಒಡಲಲ್ಲಿ ಇಂಬುಗೊಂಡಿವೆ.

---

೮. ಅರವಿಂದ ಮಾಲಗತ್ತಿ : ದಲಿತ ಮಾರ್ಗ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨, ಪುಟ - ೩೯೭
೯. ತುಂಬಾಡಿ ರಾಮಯ್ಯ : ಮಣೆಗಾರ, ಬೋಧಿನಿ ಪ್ರಕಾಶನ, ತುಮಕೂರು, ೧೯೯೯, ಪುಟ - ೧

## ದಲಿತ ಸಾಹಿತ್ಯ ವಿಮರ್ಶೆ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮಹತ್ಮಕ ಬದಲಾವಣೆಗಳಾದದ್ದು ನವ್ಯೋತ್ತರ ಅವಧಿ, ಎಪ್ಪತ್ತರ ದಶಕದಲ್ಲಿಯೇ ಅದೂವರೆಗೆ ಶಿಕ್ಷಣದಿಂದ ವಂಚಿತರಾಗಿದ್ದ ಜನರಿಗೆ ಶಿಕ್ಷಣ ದೂರಕುವಂತಾದ ಮೇಲೆ ಸಮಾಜದಲ್ಲಿ ಹೊಸ ಬದಲಾವಣೆಗಳದವು. ಅನಕ್ಷರಸ್ಥರಾಗಿದ್ದಾಗ ಯಾವ ಸಮಸ್ಯೆಗಳನ್ನು ಮೌನವಾಗಿ ಒಪ್ಪಿಕೊಂಡಿದ್ದರೋ, ಶಿಕ್ಷಣ ಪಡೆದ ಮೇಲೆ ತಮ್ಮ ಸ್ಥಿತಿಗಳ್ನು ಅರಿಯಲು ಮತ್ತು ಅವುಗಳಿಂದ ಸುಧಾರಿಸಿಕೊಳ್ಳಲು ಜನ ಆಲೋಚಿಸ ತೊಡಗಿದರು. ಮಾರ್ಕ್ಸ್, ಜ್ಯೋತಿಬಾಪುಲೆ, ಅಂಬೇಡ್ಕರ್, ಗಾಂಧಿ ಮತ್ತು ಲೋಹಿಯಾ ಅವ ಸಿಂದ್ಧಾತಗಳು ಸಮಾಜದ ಮೇಲೆ ಪ್ರಭಾವ ಬೀರತೊಡಗಿದವು. ವಿಶೇಷಾಗಿ ಅಂಬೇಡ್ಕರ್ ಚಿಂತನೆಗಳು ಶೋಷಿತ ಸಮುದಾಯಗಳಿಗೆ ಹೊಸ ದಿಗಂತವನ್ನು ತೋರಿದವು. ದಲಿತರ ಕಷ್ಟ ನಷ್ಟಗಳಿಗೆ ಧರ್ಮ, ಕರ್ಮ, ದೇವರು, ದೆವ್ವಗಳ ಕೃಪೆ ಕಟಾಕ್ಷಗಳು ಕಾರಣವೆಲ್ಲವೆಂಬುದನ್ನು ಅಂಬೇಡ್ಕರ್ ಇತಿಹಾಸ ಪುಟಗಳಿಂದ ಶಾಸ್ತ್ರ ಮತ್ತು ಪುರಾಣಗಳಿಂದ ಎತ್ತಿ ತೋರಿಸಿದರು. ಇದರಿಂದ ದಲಿತರ ದುಸ್ಥಿತಿಗೆ ಸ್ವತಃ ದಲಿತರು ಕಾರಣರಾಗಿರದೆ ಅವರನ್ನು ಆ ಸ್ಥಿತಿಗೆ ತಳ್ಳುವಲ್ಲಿ, ಸುತ್ತಲಿನ ಪ್ರತಿಪಾಲಿಸಿದರು. ಈ ಬಗೆಯ ಚಿಂತನೆಗಳು ದಲಿತ ಸಾಹಿತ್ಯ ಮತ್ತು ವಿಮರ್ಶೆಗಳಿಗೆ ಆಧಾರವಾಗಿವೆ.

ಯಾವುದನ್ನು ದಲಿತ ಚಿಂತನೆಯೆಂದು ಗುರುತಿಸಲಾಗಿದೆಯೋ ಅದು ದಲಿತ ಮತ್ತು ದಲಿತೇತರ ಲೇಖಕರಿಂದ ರೂಪಿತವಾಗಿದೆ. ಮೇಲಾಗಿ ಲೇಖಕರು ದಲಿತ ಸಾಹಿತ್ಯವನ್ನು ಲಕ್ಷಿಸದೇ ಉಳಿದ ಸಾಹಿತ್ಯವನ್ನು ಅಳೆಯಲು ಪ್ರಯತ್ನಿಸಿದ್ದಾರೆ. ಇದರ ಜೊತೆಗೆ ದಲಿತೇತರ ಲೇಖಕರೂ ಸಹ ದಲಿತ ಸಾಹಿತ್ಯ ಕುರಿತು ಚಿಂತನೆ ಮಾಡಿದ್ದಾರೆ.

ದಲಿತ ಸಾಹಿತ್ಯ ವಿಮರ್ಶೆಯಲ್ಲಿ ಸಮಾಜ ಶಾಸ್ತ್ರೀಯ ದೃಷ್ಟಿಕೋನಕ್ಕೆ ಹೆಚ್ಚಿನ ಆದ್ಯತೆ ಪ್ರಕಟವಾಗಿದೆ. ಈ ದೃಷ್ಟಿಯಿಂದ ಸಾಹಿತ್ಯವನ್ನು ಕೇವಲ ಸಾಹಿತ್ಯಕವಾಗಿ ಮಾಡದೇ ಆ ಮಾಧ್ಯಮವನ್ನು ಸಾಮಾಜಿಕ ಉದ್ದೇಶಗಳಿಗೆ ಬೆಳಸಿಕೊಳ್ಳಬೇಕೆಂಬ ಒಲವು ಇಲ್ಲಿ ಪ್ರಧಾವಾಗದೆ, ಸಾಹಿತ್ಯದಿಂದ ದೊರಕುವ ಪ್ರಯೋಜನಗಳಲ್ಲಿ ಆನಂದಾನುಭವವೇ ಮುಖ್ಯವೆಂಬ ಮಾತನ್ನು ದಲಿತ ಸಾಹಿತ್ಯ ವಿಮರ್ಶೆಗಳು ತಳ್ಳಿ ಹಾಕಿತು. ಬದುಕಿನ ಎಲ್ಲ ಮಹತ್ವ ಕ್ರಿಯೆಗಳಂತೆ ಸಾಹಿತ್ಯ ಸೃಷ್ಟಿಯೂ ಒಂದೆದು ಭಾವಿಸುತ್ತ ಇಂಥ ಕ್ರಿಯೆಂಬ ಮುಖಾಂತರ ಸಮಾಜದ ಹಿತರಕ್ಷಣೆಯಾಗಬೇಕು ಎಂಬುದು ಇಲ್ಲಿನ ಮುಖ್ಯ ಆರಂಭವಾಯಿತು. ಹೀಗಾಗಿ ದಲಿತ ಲೇಖಕರು ಸಾಹಿತ್ಯಿಕ ಕೃತಿಗಳನ್ನು ಅರ್ಥೈಸುವಾಗ ಅಲ್ಲಿನ ಸಾಮಾಜಿಕ ಅಂಶಗಳಿಗೆ ಹೆಚ್ಚಿನ ಮನ್ನಣೆ ನೀಡಿದರು. ಸಾಮಾಜಿಕ ಆಶಯಗಳನ್ನು ಪ್ರಧಾನವಾಗಿರುವ ಕೃತಿಗಳನ್ನು ಮೆಚ್ಚುತ್ತಾ ಸಾಹಿತ್ಯಾಂಶಗಳನ್ನು ಪೂರಕ ಅಂಶಗಳಾಗಿ ಗುರುತಿಸಿದರು. ಸಾಹಿತ್ಯಿಕವಾಗಿ ಉತ್ತಮ ಕೃತಿಯಾಗಿದ್ದರೂ, ಅದು ಪ್ರತಿಗಾಮಿ ಧೋರಣೆಯುಳ್ಳದ್ದಾಗಿದ್ದರೆ, ಅಂಥದನ್ನು ಟೀಕೆಗೆ ಒಳಪಡಿಸಲಾಯಿತು.

ದಿವಂಗತ ದೇವಯ್ಯ ಹರವೆ ಅವರು 'ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು' ಎಂಬ ಕೃತಿಯನ್ನು ಪ್ರಕಟಿಸಿದ್ದು ಇದರಲ್ಲಿ ಒಟ್ಟು ಹದಿನಾಲ್ಕು ಲೇಖನಗಳಿವೆ. ದಲಿತ, ಬಂಡಾಯವೂ ಸೇರಿದಂತೆ ಕುವೆಂಪು, ಪುತಿನ, ಭೈರಪ್ಪ, ನಾಗಾವಾಕರ ಕೃತಿಗಳನ್ನು ವಿಮರ್ಶೆಗೆ ಒಳಪಡಿಸಿದ್ದಾರೆ. ನವ್ಯದ ಕಾಲದಲ್ಲಿ ಚಾಲ್ತಿಗೆ ಬಂದ

ಪ್ರಯೋಗಿಕ ರೂಪನಿಷ್ಠ ಮತ್ತು ರಸವಿಮರ್ಶೆಯಂಥದ ಸಾಹಿತ್ಯಿಕ ಮಾನದಂಡಗಳ ಬಗೆಗೆ ಹರವೆ ಅವರು ಆಕ್ಷೇಪಿಸುತ್ತಾರೆ. ಸಾಹಿತ್ಯವು ನೋವು ಅಪಮಾನಗಳನ್ನು ಬಿಂಬಿಸಬೇಕೆ ಹೊರತು ರಸ ಸಂಧಾನವನಲ್ಲ. ಸಾಹಿತ್ಯದ ಮುಖೇನ ಹಳೆಯ ನಂಬಿಕೆಗಳನ್ನು ಬಲಪಡಿಸುವ ಜಡ ಸಂಪ್ರದಾಯದ ಸಾಹಿತ್ಯವನ್ನು ವಿರೋಧಿಸಬೇಕೆಂದೂ ಹರವೆ ಅವರವಾದ. ಭೈರಪ್ಪನವರ 'ದಾಟು' ಕಾದಂಬರಿಯನ್ನು ವಿಶ್ಲೇಷಿಸುತ್ತಾ, ಕಾದಂಬರಿಯಲ್ಲಿ "ಶ್ರೀನಿವಾಸನ ಹೆಂಡತಿ ಸತ್ತ ವರ್ತಮಾನ ಕೇಳಿದಾಗ ಅವಳಿಗೆ ಕೆಡುಕೆನಿಸಿತು. ಇದೇನು ಅಪ್ಪನ ಶಾಪವೇ ಎಂಬದು ಅವಳ ತಲೆಗೂ ಬಂತು. ಇಲ್ಲಿ ಶಾಪ ಎಂಬುದು ಹಳೆಯ ಕಾಲದ ಜಡ್ಡುಗಟ್ಟಿದ ಮೌಲ್ಯ ಎಂದು ಕಾದಂಬರಿಯು ಸ್ವೀಕರಿಸುವುದಿಲ್ಲ. ಇಲ್ಲಿ ಇದೊಂದು ಪ್ರಮುಖ ಪಾತ್ರವಾಗಿ ಬಿಡುತ್ತದೆ. ಬದಲಾವಣೆಯೇ ಜೀವನದ ಜೀವಂತಿಕೆಯ ಅನಿವಾರ್ಯ ಲಕ್ಷಣವಾಗಿರುವಾಗ ಅದು ಸಾಧ್ಯವಿಲ್ಲವೆಂಬ ನಿಲುವು ಕಾದಂಬರಿಯಲ್ಲಿ ಉದ್ದಕ್ಕೂ ಗಟ್ಟಿಯಾಗುತ್ತದೆ."[೧]

ದೇವಯ್ಯ ಹರವೆಯವರು 'ಶೂದ್ರ ಸಾಹಿತ್ಯದಿಂದ ಪುರೋಹಿತ ಶಾಹಿಯೆಡೆಗೆ' ಎಂಬ ಲೇಖನದಲ್ಲಿ ಪ್ರತಿಪಾದಿಸಿದ ವಿಚಾರಗಳೂ ಕೂಡಾ ಗಮನಾರ್ಹವೆನಿಸಿದೆ. 'ನೆನಪಿನ ದೋಣಿ'ಯಲ್ಲಿ ದಾಖಲಾದ ಕುವೆಂಪು ವಿಚಾರಗಳನ್ನು ಪರೀಕ್ಷೆಗೆ ಒಡ್ಡುತ್ತಾ, ಹಂಬೆಯವರು "ಕುವೆಂಪು ಪ್ರಕೃತಿ ತತ್ವಕ್ಕೆ ಹತ್ತಿರವಾಗಿ ಬದುಕುತ್ತಿರುವ ಮನುಷ್ಯನ ಪೂಜಾ ವಿಧಿಗಳನ್ನು ಅಚ್ಚಿಕೊಂಡಿರುವುದು ತಿಳಿದು ಬರುತ್ತದೆ" ಎಂದು ಅಭಿಪ್ರಾಯ ಪಟ್ಟಿದ್ದಾರೆ. ಶೂದ್ರರು ಪೂಜೆಯಲ್ಲಿಟ್ಟು ಹೆಂಡ ಮಾಂಸಗಳನ್ನು ತೆಗೆದು ಅಲ್ಲಿ ಭಗವದ್ಗೀತೆಯ ಪ್ರತಿಯನ್ನು ಸ್ವಾಮಿವಿವೇಕಾನಂದ ಅಥವಾ ರಾಮಕೃಷ್ಣ ಪರಮಹಂಸರ ಪಾಠವನ್ನೂ ಮಣೆಯ ಮೇಲೆ ಸ್ಥಾಪಿಸಿ ಹೂ ಮುಡಿಸಿ ಮಂತ್ರಗಳನ್ನು ಶ್ಲೋಕಗಳನ್ನು ಮನಸ್ಸಿನಲ್ಲಿಯೇ ಹೇಳಿಕೊಳ್ಳುತ್ತಾ ಮಾತೆಗೆ ಶಂತಿ ಕೋರಿ ಧೂಪ ಹಾಕಿವೆ (ನೆನಪಿನ ದೋಣಿಯಲ್ಲಿ ಪುಟ ೪೧೭) ಎಂಬ ಕುವೆಂಪು ಅವರ ನಿಲುವನ್ನು ವಿಮರ್ಶಿಸುತ್ತಾರೆ ಶೂದ್ರರದೂ ಪೂಜೆಯೇ ಪುರೋಹಿತ ವರ್ಗದ ಶಿಷ್ಟಚಾರದ ಪೂಜೆಯೂ ಪೂಜೆಯೇ ಎರಡೂ ಮನುಷ್ಯ ಕುಲದ ಪ್ರತಿಗಾಮಿ ತತ್ವವನ್ನು ಪ್ರತಿಪಾದಿಸುತ್ತವೆ ಎಂದು ಹರವೆಯವರು ಗುರುತಿಸಿರುವುದು ಹೊಸ ವಿಚಾರವಾಗಿದೆ.

ಬಿ. ಕೃಷ್ಣಪ್ಪನವರ 'ಕುವೆಂಪು ಕಾದಂಬರಿಗಳಲ್ಲಿ ದಲಿತ ಜೀವನ ಚಿತ್ರಣ' ವೆಂಬ ಲೇಖನವು ಕುತೂಹಲಕಾರಿಯಾಗಿವೆ. ನವೋದಯದ ಸಂದರ್ಭದಲ್ಲಿ ಕುವೆಂಪು ಮಾತ್ರ ಬ್ರಾಹ್ಮಣೇತರ ಸಮುದಾಯದಿಂದ ಬಂದವರಾಗಿದ್ದು ಅವರ ಒಟ್ಟು ಸಾಹಿತ್ಯವು ಪುರೋಹಿತ ಶಾಹಿಯ ವಿರುದ್ಧ ದೊಡ್ಡ ದನಿಯನ್ನೇ ತೆಗೆದಿತ್ತು. ಕುವೆಂಪು ಅವರ 'ಶೂದ್ರ ತಪಸ್ವಿ' ನಾಟಕಕ್ಕೆ ಡಿ.ವಿ.ಜಿ. ಮಾಸ್ತಿಯಂಥವರು ಅಸಹನೆಯಿಂದ ಮಾತನಾಡಿದ್ದರು. ಇಂಥ ಅನಾರೋಗ್ಯಕರ ಟೀಕೆಗಳಿಗೆ ಕುವೆಂಪು ಎಳ್ಳಷ್ಟು ಜಗ್ಗದೆ ಬ್ರಾಹ್ಮಣ ಶಾಹಿ ವಿರುದ್ಧ ತಮ್ಮ ಕೃತಿಗಳ ಮೂಲಕ ಪ್ರತಿಭಟನೆ ತೋರಿದ್ದರು. ಆದರೆ ಕುವೆಂಪು ಅವರ ಒಟ್ಟು ಧೋರಣೆಯಲ್ಲಿ ಬ್ರಾಹ್ಮಣ ಶಾಹಿಯನ್ನು ವಿರೋಧಿಸಿದ್ದರೂ ದಲಿತರನ್ನು ಯಥಾ ಸ್ಥಿತಿಯಲ್ಲಿಯೇ ನೋಡಿದರೆಂದು ಬಿ. ಕೃಷ್ಣಪ್ಪನವರ ಅಭಿಪ್ರಾಯ. ತಮ್ಮ ವಾದದ ಸಮರ್ಥನೆಗಾಗಿ ಕುವೆಂಪು ಅವರ ಎರಡೂ ಕಾದಂಬರಿಗಳನ್ನೂ ವಿಮರ್ಶೆಗೆ ಒಳಪಡಿಸಿದ್ದಾರೆ. 'ಕಾನೂರು ಹೆಗ್ಗಡತಿ' ಯಲ್ಲಿ ಚಿನ್ನಮ್ಮನ ಮದುವೆ ಸಂದರ್ಭದಲ್ಲಿ ಹೊಲೆಯರು ವಾಲಗ ಊದುತ್ತಿದ್ದಾಗ ಆ ಬಗ್ಗೆ ಗೌಡರ ಮನೆಯ ಕಾಡು, ತಿಮ್ಮು, ಧರ್ಮು ಮುಂತಾದ ಹುಡುಗರು 'ಥೂ ಹೊಲೆರ ಕೈಲಿ ಯಾರಾರು ಮದುವೆ ಮನೆ ವಾಲಗ ಊದುಸ್ತಾರೇನೋ ಅಲ್ವೇನೋ' ದರ್ಮು ಎಂದು ಮಾತಾಡಿಕೊಳ್ಳುವವರನ್ನು ಕೃಷ್ಣಪ್ಪ

---

೧. ದೇವಯ್ಯ ಹರವೆ : ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ಪುಟ - ೧೧೦

ಗುರುತಿಸುತ್ತಾ "ಬ್ರಾಹ್ಮಣ ಹುಡುಗರು ಶೂದ್ರರನ್ನು ಕಂಡು ಜಿಗುಪ್ಸೆ ಗೊಂಡರೆ ಅದನ್ನು ಕುರಿತು ಪ್ರತಿಭಟಿಸುವ ಕುವೆಂಪು ಅವರು ಶೂದ್ರರ ಹುಡುಗರು ದಲಿತರನ್ನು ಕಂಡು ಅಸಹ್ಯ ಪಡುವಾಗ ಪ್ರತಿಕ್ರಿಯಿರುವುದಿಲ್ಲ ಯಾಕೆ"[೨] ಎಂದು ಪ್ರಶ್ನಿಸುತ್ತಾರೆ.

ಮತ್ತೊಂದು ಪ್ರಸಂಗವನ್ನು ಎತ್ತಿ ಉದಾಹರಿಸುತ್ತಾ ಕುಳುವಾಡಿ ಸಣ್ಣ ಮಗಳು ಪುಟ್ಟಿಯನ್ನು ಬಣವೆ ಸಂದಿನಲ್ಲಿ ತಿಮ್ಮಪ್ಪ ಹೆಗ್ಗಡೆ ಕೆಡಿಸಿದಾಗ ಕುವೆಂಪು ಕೊಡುವ ಚಿತ್ರ ಹೀಗಿದೆ : ಚೆನ್ನಾಗಿ ಮೇಯಿಸಿ ಶುಚ್ಚಿಯಾಗಿಟ್ಟು ಒಳ್ಳೆಯ ಆಹಾರ ತಿನ್ನಿಸಿ ಸಾಕಿದ್ದ ಮನೆಯ ಬೀದಿ ನಾಯಿ ಸೊಣಬಿನ ಸಮಯ ಬಂದಾಗ ದದ್ದು ಹಿಡಿದು ವಿಕಾರವಾಗಿದ್ದರೂ ಲಕ್ಷಿಸದೆ ಚೀನಿ ನಾಯಿಯ ಸಂಗ ಬಯಸಿ ಸರಪಣಿ ಕಾಂಪೌಡುಗಳಿಂದ ನುಣಚಿಕೊಂಡು ಪೋಲಿಬೀಳುವಂತೆ ತಿಮ್ಮಪ್ಪ ಕೀಳುಜಾತಿಯ ಹಟ್ಟಿ ಬಿಡಾರ, ಜೊಪಡಿಗಳಲ್ಲಿಯೂ ಸುಖವನ್ನರಿಸಿ ಪಡೆದಿದ್ದನು. ಇದನ್ನು ಕೃಷ್ಣಪ್ಪನವರು "ತಿಮ್ಮಪ್ಪನನ್ನು ಶುಚಿಯಾದ ಚೀನೀ ನಾಯಿಗೂ, ಪುಟ್ಟಿ ಸಮೇತ ಉಳಿದ ದಲಿತ ಹೆಣ್ಣು ಮಕ್ಕಳನ್ನು ದದ್ದು ಹಿಡಿದು ವಿಕಾರವಾದ ಬೀದಿ ನಾಯಿಗಳಿಗೂ ಹೋಲಿಸಿರುವ ಲೇಖಕರ ಹೀನೋಪಮೆ ಖಂಡನೀಯ. ಅಲ್ಲದೇ ದಲಿತ ಹೆಣ್ಣು ಮಕ್ಕಳ ಮಾಭಂಗಕ್ಕಿಂತ ಗೌಡರ ಹುಡುಗನ ಪಾವಿತ್ರತೆ ಹಾಳಾಯಿತಲ್ಲ ಎಂಬ ಲೇಖಕರ ಕಳಕಳಿ ಇಡೀ ಮಾನವೀಯತೆಯ ಮುಖಕ್ಕೆ ಮಸಿಬಳಿದಂತಿದೆ."[೩] ಎಂದು ಅಭಿಪ್ರಾಯ ಪಟ್ಟಿದ್ದಾರೆ. ಅವರ ಪ್ರಕಾರ ಕುವೆಂಪು ಅವರು ತಮ್ಮ ಕಾದಂಬರಿಗಳಲ್ಲಿ ವರ್ಗ ಹಿತಾಶಕ್ತಿಯ್ನು ಕಾಪಾಡಿಕೊಂಡು ದಲಿತರನ್ನು ಯಥಾ ಸ್ಥಿತಿಯಲ್ಲಿಯೇ ನೋಡಿರುವುದರಿಂದ ದಲಿತ ಜೀವನ ಚಿತ್ರಣಕ್ಕೆ ಅಥೆಂಟಿಸಿಟಿಯನ್ನು ಸಮತೋಲನ ತಂದು ಕೊಡದೇ ಹೋಗುತ್ತದೆ. ಎಂಬ ಮಾತು ವಾಸ್ತವಿಕವಾದುದು.

ದಲಿತ ಸಾಹಿತ್ಯ ವಿಮರ್ಶೆಯಲ್ಲಿ ಕಾರಂತ, ಭೈರಪ್ಪ, ಅನಂತ ಮೂರ್ತಿ ಅವರ ಕಾದಂಬರಿಗಳನ್ನು ಪರೀಕ್ಷೆಗೊಳಪಡಿಸಲಾಗಿದೆ. ಬರಗೂರು ಅವರು ಭೈರಪ್ಪನವರ ವಂಶವೃಕ್ಷ ಕಾದಂಬರಿಯನ್ನು ಸನಾತನ ಮೌಲ್ಯಗಳನ್ನು ವಿಶ್ಲೇಷಿಸುತ್ತಾ" ಬದಲಾಗುತ್ತಿರುವ ಕಾಲಮಾನದಲ್ಲಿ ನಿಂತು ಭೈರಪ್ಪನವರು ಶ್ರೀನಿವಾಸ ಶ್ರೋತ್ರಿಯವರಂತಹ ಸನಾತನ ಮೌಲ್ಯಗಳನ್ನು ಪ್ರತಿಪಾದಿಸುವ ಪಾತ್ರವನ್ನು ಎತ್ತಿ ಹಿಡಿಯುತ್ತಾ ಹೊಸ ಮೌಲ್ಯ ಸಾಧನೆಗೆ ತೊಡಗಿದ ರಾಜರಾವ್ ಮತ್ತು ಕಾತ್ಯಾಯನಿ ಅವರನ್ನು ಉದ್ದೇಶ ಪೂರ್ವಕವಾಗಿ ಸೋಲಿಸುತ್ತಾ ಕೊಂಡೊಯ್ಯಿದ್ದಾರೆ."[೪]

ಹೀಗೆ ದಲಿತೇತರ ದಲಿತ ಬದುಕಿನ ಚಿತ್ರಣ ನೀಡುವ ಕೃತಿಗಳನ್ನು ವಿಮರ್ಶಿಸುವ ಅನೇಕ ದಲಿತ ವಿಮರ್ಶಕರು ಬಂದರು ಅವರಲ್ಲಿ ಡಾ. ಅರವಂದ ಮಾಲಗತ್ತಿ, ಮೊಗಳ್ಳಗಣೇಶ್ ಮುಳ್ಳೂರು ನಾಗರಾಜ, ಡಾ. ಎಸ್. ಚಂದ್ರಕಿರಣ್ ಮುಂತಾದವರು ಪ್ರಮುಖರಾಗಿದ್ದಾರೆ.

---

೨. ಬಿ. ಕೃಷ್ಣಪ್ಪ : ಚಿಂತನಗಳು ಮತ್ತು ಬರಹಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೧೯೯೯, ಪುಟ - ೨೨೨
೩. ಅದೇ ಪುಟ - ೨೨೩
೪. ಬರಗೂರು ರಾಂಚಂದ್ರಪ್ಪ : ವಂಶವೃಕ್ಷ - ಒಂದು ಅಧ್ಯಯನ, ಕನ್ನಡ ಪುಸ್ತಕ ಪ್ರಾಧಿಕಾರ ೧೯೮೧, ಪುಟ - ೧೫

# ದಲಿತ ಸಾಹಿತ್ಯದ ಭಾಷಿಕ ನೆಲೆ

ಆಧುನಿಕ ಕನ್ನಡ ಸಾಹಿತ್ಯ ಘಟ್ಟಗಳಲ್ಲಿ 'ದಲಿತ ಸಾಹಿತ್ಯ'ವು ಎಲ್ಲಾ ದೃಷ್ಟಿಯಿಂದಲೂ ಹೊಸ ಆಯಾಮವನ್ನು ಕಂಡುಕೊಂಡಿತು. ಸಾಹಿತ್ಯದ ವಸ್ತು, ಶೈಲಿ, ಛಂದಸ್ಸು ಮುಂತಾದವು ಹೊಸ ರೂಪ ತಾಳದಂತೆ ಸಾಹಿತ್ಯದ ಭಾಷೆಯ ಬಳಕೆಯಲ್ಲಿಯೂ ಸಹ ವಿಶಿಷ್ಟತೆಯನ್ನು ತಂದಿತು. ಹಿಂದೆ ಯಾವ ಭಾಷೆಯನ್ನು ಗ್ರಾಮ್ಯ ಭಾಷೆ ಎಂದು ತಿಳಿದು ಅದನ್ನು ಸಾಹಿತ್ಯ ರಚನೆಯಿಂದ ಕೈ ಬಿಡಲಾಗಿತೋ ಅಂತಹ ಭಾಷೆಯನ್ನೇ ಸಾಹಿತ್ಯ ಭಾಷೆಯಾಗಿ ಬಳಸಲಾಯಿತು. ಅಂದರೆ ಇಲ್ಲಿ ಗಮಾರ್ ಭಾಷೆಯೇ ಗರಮ್ ಆಗಿ ಸಾಹಿತ್ಯ ರೂಪ ಪಡೆಯಿತು. ಅಂಥ ಪ್ರಯತ್ನ ಮಾಡಿದ ಮೊದಲಿಗರು ದೇವನೂರು ಮಹಾದೇವ ಅವರು.

ದೇವನೂರರು ತಮ್ಮ ದ್ಯಾವನೂರು ಕಥಾ ಸಂಕಲನದಲ್ಲಿ ಬಳಸಿದ ಭಾಷೆಯೇ ಮುಂದುವರಿದು 'ಕುಸುಬಾಲೆ'ಯಲ್ಲೂ ಬಳಸಿದರು. ಅವರು ಭಾಷೆಯನ್ನು ಬಳಸಿರುವಂತೆ ಕನ್ನಡ ಕಾದಂಬರಿ ಸಂದರ್ಭದಲ್ಲಿ ಬಳಕೆಯಾಗಿರುವುದು ವಿರಳ. ಇಲ್ಲಿ ಬಳಕೆಯಾಗಿರುವ ಭಾಷೆ ಚಾಮರಾಜನಗರ ಮತ್ತು ಅದರ ಸುತ್ತಮುತ್ತ ರೂಢಿಯಲ್ಲಿರುವ ಭಾಷೆ. ಆದರೆ ವಾಕ್ಯ ರಚನೆ, ಪ್ಯಾರಗಳ ರಚನೆಯಲ್ಲಿ ಹೊಸ ತನವಿದೆ. ಭಾಷೆಯ ಈ ಹೊಸತನ ಒಂದು ಸಮುದಾಯಕ ಸಂವೇದನೆಯನ್ನು ಹೊಸ ರೀತಿಯಲ್ಲಿ ಅಭಿವ್ಯಕ್ತಿಗೊಳಿಸುತ್ತದೆ. ಈ ಹೊಸ ಸಂವೇದನೆ ಕಾದಂಬರಿಯ ಧನಿಯಲ್ಲೂ ಅಡಕವಾಗಿದೆ. ಕಾದಂಬರಿಯಲ್ಲಿ ಶೋಷಿತ ಜನರಿದ್ದಾರೆ. ಕ್ರೌರ್ಯವಿದೆ. ಕೊಲೆಯಾಗುತ್ತದೆ. ಆದರೆ ಇದ್ಯಾವುದೂ ಕಾದಂಬರಿಯ ವಸ್ತುವಲ್ಲ. ಕಾದಂಬರಿಯ ವಸ್ತುವೇ ಬೇರೆ. ಆದ ಕಾರಣ ಭಾಷಾ ಪ್ರಯೋಗವೇ ಬೇರೆಯಾಗಿದೆ. ವ್ಯಕ್ತಿ ಸ್ವಾತಂತ್ರ್ಯದ ಸಮಾನತೆಯನ್ನು ಕಂಡುಕೊಳ್ಳಲು ಬಯಸಿರುವ ಚೆನ್ನ, ಗಾರೆಸಿದ್ಮಾವ, ಅಮಾಸ ಇತ್ಯಾದಿ ಪಾತ್ರಗಳ ಹಿನ್ನೆಲೆಯಲ್ಲಿ ಯಾವ ತಾತ್ವಿಕನ ಅಥವಾ ದಾರ್ಶನಿಕನ ಗಂಭೀರ ಚಿಂತನೆಯಲ್ಲ. ಆದುದರಿಂದ ಇಂಥ ಪಾತ್ರಗಳ ಹಾಗೂ ಪ್ರತಿಭಟನೆಗಳ ಅನುಭವವನ್ನು ಚಿತ್ರಿಸಲು ಭಾಷೆಯ ಪ್ರಯೋಗ ಹೊಸದಾಗಿದೆ. ಅದಕ್ಕೆ ಹೊಂದಿಕೊಳ್ಳುವಂತಾಗಿದೆ. ಕಾದಂಬರಿಯುದ್ದಕ್ಕೂ ವಾಕ್ಯರಚನೆ ಮತ್ತು ಪ್ಯಾರಾಗಳ ರಚನೆ ನಮ್ಮ ಗಮನ ಸೆಳೆಯುತ್ತವೆ. ಅವು ಕನ್ನಡ ಭಾಷೆಯಲ್ಲಿ ನಮಗೆ ಪರಿಚಯವಿರುವಂತೆ ಕೊನೆಯಾಗುವುದಿಲ್ಲ ಅಥವಾ ನಾವು ನಿರೀಕ್ಷೆ ಮಾಡದ ರೀತಿಯಲ್ಲಿ ಕೊನೆಯಾಗಿ ವ್ಯಾಕ್ಯಗಳ ಮತ್ತು ಪ್ಯಾರಗಳು ಅರ್ಧಕ್ಕೆ ನಿಂತಿವೆ ಎನಿಸುತ್ತದೆ.ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಹೊಸತೆನಿಸಿರುವ ಈ ಭಾಷೆಯನ್ನು ಕಾದಂಬರಿಕಾರರು ಅತ್ಯಂತ ಸೃಜನಾತ್ಮಕವಾಗಿ ಬಳಸಿಕೊಂಡಿದ್ದಾರೆ.

'' ಹೀಗೆ ಮಗಳು ಮಾಕ್ವ ಮುಚ್ಕಾಂಡು ಸೊರಗುಟ್ತ ಅವ್ವ ಹಿಡುತ ಬುಡದಿರಲು ಹೀಗೆ

''ಆಗಲೀಗ ಅಕ್ಕಮಾದೇವಮ್ಮಗ .........ಮಕ್ಕಾವು ಉಕ್ತಾ '' ಅಯ್ಯಯ್ಯೋ ನನ್ನ ಕಂದಂ ನಿಂಗ ಮಾಕ ಮೊರ ಮಯ್ಯ ಅಂತ ನೋಡ್ಡಿಯಾ ಹೊಡಿತಲ್ಲಪ್ಪ ಈ ನನ್ನ ಹಾಳಾದ ಕೈಗಳೂ ................ ಇವು ಎಂದ್ಗಪ್ಪ ಸೋದೋಗದು............... ಇವು ........ಅಂಕಳೊಂತೆ.''[೧]

''ಆ ಎದ್ದೂತು ಆಗ ಈರಿ ಗಂಡೂಗ ಆರಿಸಿದ್ದ ಅವ್ವಾನ ದನಿ ಬಂದೂ ? ಬುಟ್ಗಂಡು ಕಣ್ಣು ಕಿವೀಗೂ ತೆವೆಯೂತ ಪುಟ್ಟೀಯ ಬಳಿ ತಾ ಬಂದೂ''[೨]

---

೧. ದೇವನೂರು ಮಹಾದೇವ, ಕುಸುಮ ಬಾಲೆ, ಪುಸ್ತಕ ಪ್ರಕಾಶನ, ಮೈಸೂರು ೨೦೦೪, ಪುಟ - ೨೬

೨. ಅದೇ ಪುಟ - ೪೭

ಕುರಿಯಯ್ಯ ಮಾತನಾಡುವ ಉದ್ದನೆಯ ಪ್ಯಾರ ಹೀಗೆ ಕೊನೆಯಾಗುತ್ತದೆ.

"ನಮ್ ಜಾತಿ ಬಡ್ಡತ್ತವ್ಕ ಬೇಕಿದ್ದೂ ಆದೀಯ. ಆ ಉತ್ತಮರ ಕಾಲದಲ್ಲಿ ತೋರ್ಸಿದ್ದ ಇವ್ರು ಕೈಲಿ ಮಾಡ್ಕಳರು, ಇರಾರು"[೩]

ಇನ್ನೊಂದು ಪ್ಯಾರದ ಮಧ್ಯೆಯಲ್ಲಿ ಬರುವ ವಾಕ್ಯ ಹೀಗಿದೆ.

"............... ನಾನು ಹೇಳ್ತಾ ಇದ್ದುದು ಏನಪ್ಪ ಅಂದ್ರೆ ............ಅಂದಂಥ ಡಾಕ್ಟರುಗ............ ಉಚ್ಚಾರ ಮಾಡ್ವಾಗ ಹೊರಳದ ನಾಲುಗ ತುದಿ ಕತ್ತರ್ಸಿ ರಕ್ತ ಚಿಲುಗುಟ್ತಾ ನರಳ್ತಾ ....."[೪]

ಹೀಗೆ ಕಾದಂಬರಿಯ ತುಂಬ ಹಲವಾರು ಉದಾಹರಣೆಗಳು ಸಿಗುತ್ತವೆ. ಆರಂಭದ ಪುಟಗಳಿರುವ ಮತ್ತೊಂದು ವಾಕ್ಯವನ್ನು ವಿಶ್ಲೇಷಣೆಗೆ ಇಲ್ಲಿ ಉಲ್ಲೇಖಿಸಬಹುದು.

"ಮಂಚದ ಕಥಾ ಆಲಿಸುತ್ತಿದ್ದ ಆ ಜೀವಾತ್ಮನು, ಸೋಮಪ್ಪನ ......ವನ್ನು ಸೇರುವುದಕ್ಕೂ ಮೊದಲಾಗಿ ಸೋಮಪ್ಪನ ತಂದೆ ಯಾಡನು. ಯಾಡನ ತಾಯಿ ಅಕ್ಕಮಹಾದೇವಮ್ಮನು "[೫]

ಇಲ್ಲಿ ಮೊದಲ ವಾಕ್ಯದಲ್ಲಿ ಕಾದಂಬರಿಕಾರರು ಕಥೆ ನಡೆಯುತ್ತಿರುವ ಸಂದರ್ಭದಿಂದ ಎರಡು ತಲೆಮಾರು ಹಿಂದಕ್ಕೆ ಸರಿಯುತ್ತಾರೆ. ಇದಕ್ಕೆ ಎಷ್ಟು ಭಾಷೆ ವ್ಯಯವಾಗುತ್ತಿತ್ತು ಎಂಬುದನ್ನು ಸಾಧಾರಣ ಕಥನ ಶೈಲಿಯಲ್ಲಿ ಬರೆದಿರುವ ಕಾದಂಬರಿಗಳಲ್ಲಿ ನೋಡಬಹುದು. ಎರಡನೇ ತಲೆಮಾರಿನಷ್ಟು ಹಿಂದಕ್ಕೆ ಸರಿಯುವ ಕಥೆಯ ಕಾಲ ಬದಲಾವಣೆಯ ಸಂಕ್ರಮ ತಾಂತ್ರಿಕವಾಗಿ ಹೇಗೆ ನಡೆಯಬೇಕು ಎಂಬುದನ್ನು ಬರಹಗಾರರು ಎದುರಿಸುವ ಪ್ರಶ್ನೆ. ಅದು ಕಲಾತ್ಮಕವಾಗಿ ಎಷ್ಟು ಸಫಲವಾಗಿದೆ ಎಂಬುದನ್ನು ಓದುಗರು ಪರಿಶೀಲಿಸುವ ಪ್ರಶ್ನೆ. ಮೇಲೆ ಉಲ್ಲೇಖಿಸಿರುವ ಭಾಗದಲ್ಲಿ ಮೊದಲ ವಾಕ್ಯರಚನೆ ಕನ್ನಡದಲ್ಲಿ ನಮಗೆ ಪರಿಚಯವಿರುವಂಥದ್ದಲ್ಲ.

" ಮಂಚದ ಕಥಾ ಆಲಿಸುತ್ತಿದ್ದ ಆ ಜೀವಾತ್ಮನು ಸೋಮಪ್ಪನವರ ಘಟವನ್ನು ಸೇರುವುದಕ್ಕೂ ಮೊದಲಾಗಿ ಸೋಮಪ್ಪನ ತಂದೆ ಯಾಡನು. "

ಯಾಡನು ಆದಮೇಲೆ ಪೂರ್ಣ ವಿರಾಮವಿದೆ. ಅಂದರೆ ವಾಕ್ಯದ ಅರ್ಥವನ್ನು ತೆಗೆದುಕೊಂಡರೆ ಪೂರ್ಣ ವಿರಾಮ ಸರಿಯಾದ ಜಾಗದಲ್ಲಿ ಬಂದಂತೆ ಕಾಣುವುದಿಲ್ಲ. ಯಾಡನು ಏನು ಮಾಡಿದ ? ಯಾಡನಿಗೆ ಏನಾಯಿತು ? ಇತ್ಯಾದಿ ಪ್ರಶ್ನೆಗಳನ್ನು ಕೇಳಲು ಸಾಧ್ಯವಿದೆ. ಆದರೆ ಮಹಾದೇವರ ಅವರ ಗದ್ಯಶೈಲಿ ವಾಚ್ಯಾರ್ಥದಲ್ಲಿ ಕೆಲಸ ಮಾಡುವುದಿಲ್ಲ. ಪದ್ಯದಲ್ಲಿ ಆಗುವಂತೆ ಸೂಚ್ಯಾರ್ಥದ ಮಟ್ಟದಲ್ಲಿ ಕೆಲಸ ಮಾಡುತ್ತದೆ. ಆದುದರಿಂದ ಸೋಮಪ್ಪನವರ 'ಜೀವಾತ್ಮ' ಅಂದರೆ ಜೀವ ಅವರ 'ಘಟವನ್ನು' ಅಂದರೆ 'ದೇಹ' ವನ್ನು ಸೇರುವುದಕ್ಕೆ ಮೊದಲಾಗಿ ಅಂದರೆ ಹುಟ್ಟುವುದಕ್ಕೆ ಮುಂಚೆ ಯಾಡನನ್ನು ತಂದೆ ಎಂದು ಕರೆಯಲು ಸಾಧ್ಯವಿಲ್ಲ. ಆದ್ದರಿಂದ ಸೋಮಪ್ಪನವರು ಹುಟ್ಟುವುದಕ್ಕೆ ಮುಂಚೆ ಅವರ ತಂದೆಯಾದ ಯಾಡೇಗೌಡನು ಇದ್ದಂಥ ಅವಸ್ಥೆಯಲ್ಲಿ ಎನ್ನುವ ಅರ್ಥ ಪಡೆಯುತ್ತದೆ. 'ಯಾಡನ ತಾಯಿ ಅಕ್ಕಮಹಾದೇವಮ್ಮನು ' ಎಂದಿದೆ. ಆದುದರಿಂದ ಯಾಡನನ್ನು ಅವನ ತಾಯಿಯ ದೃಷ್ಟಿಯಿಂದ ನೋಡಿದಾಗ ಅವನ ಶೈಶವಾವಸ್ಥೆಯಲ್ಲಿ ಎನ್ನುವ ಅರ್ಥ ಬರುತ್ತದೆ. ಇಷ್ಟೆಲ್ಲಾ ಅರ್ಥವನ್ನು ಕಾದಂಬರಿಕಾರರು ಕೇವಲ ಹದಿನೈದು ಪದಗಳಲ್ಲಿ ಹಿಡಿದಿಡುತ್ತಾರೆ. ಈ ಭಾಷಾ ಮಿತವ್ಯಯ ಗದ್ಯದ ಪದ್ಯ ಸಾಧ್ಯತೆಗಳನ್ನು ತೋರಿಸುವುದರ

೩. ದೇವನೂರು ಮಹಾದೇವ, ಕುಸುಮ ಬಾಲೆ, ಪುಸ್ತಕ ಪ್ರಕಾಶನ, ಮೈಸೂರು ೨೦೦೪, ಪುಟ - ೬೨

೪. ಅದೇ ಪುಟ - ೬೫

೫. ಅದೇ ಪುಟ - ೮

ಜೊತೆಗೆ ದಲಿತ ಸಮುದಾಯದ ಹೊಸ ಸಂವೇಧನೆಯನ್ನು ಸೂಚಿಸುತ್ತಾ ಅದರ ದನಿಯನ್ನು ನಿರ್ಧರಿಸುತ್ತದೆ. ಈ ವಿಶಿಷ್ಟ ವಾಕ್ಯಾರಚನೆ ಮತ್ತು ಭಾಷೆಯ ಸತ್ವ ಎಲ್ಲವನ್ನೂ ಸಮರ್ಪಕವಾಗಿ ಜನಪದ ಧಾಟಿಗೆ ಅಳವಡಿಸಿಕೊಂಡು ದುಡಿಸಿಕೊಂಡಿರುವ ರೀತಿಯಲ್ಲಿ ಭಾಷೆ ಅರ್ಥಗರ್ಭಿತವಾಗಿ ತಾನೇ ಕಾವ್ಯಮಯವಾಗಿದೆ. ಹಲವಾರು ಕಡೆ ಭಾಷೆ ವ್ಯಾಕರಣ ದಿಗ್ಬಂಧನ ಗಳನ್ನು ಮೀರಿ ನಿಲ್ಲತ್ತದೆ. ಈ ಬಂಧನಗಳನ್ನು ಕಳಚಿಕೊಂಡಿರುವುದು. ಅನಾದಿಕಾಲದಿಂದಲೂ ಸಮಾಜದ ಜಾತಿ ದಿಬ್ಬಂಧನದಲ್ಲಿ ಕೈದಿಯ ಸ್ಥಿತಿಯಲ್ಲಿದ್ದ ದಲಿತರು ಈ ಸ್ಥಿತಿಯನ್ನು ಮೀರಿ ಮಾನವೀಯ ಸ್ವಾತಂತ್ರ್ಯ ವನ್ನು ಕಾಣುವ ಸಂಕೇತವಾಗಿದೆ.

ಒಂದೆರಡು ಕತೆ ಬಿಟ್ಟು ಕಾದಂಬರಿಯುದ್ದಕ್ಕೂ ಒಂದೇ ಉಪಭಾಷೆ ಪ್ರಯೋಗವಾಗಿದೆ. ಆದರೆ ಶೈಲಿ ಮಾತ್ರ ವೈವಿಧ್ಯಮಯವಾಗಿದೆ. ಉದಾಹರಣೆಗೆ ಹರಿಕಥೆಯ ಶೈಲಿ ಮಕ್ಕಳಿಗೆ ಕಥೆ ಹೇಳುವ ಶೈಲಿ, ಮಂಚದ ಹರಾಜಿನ ಸಂದರ್ಭದಲ್ಲಿ ಜಾಮದಾರ ಬಳಸುವ ಹಾವಾಡಿಗನ ಮೋಡಿಯ ಅರೆ ಪದ್ಯ ಅರೆ ಗದ್ಯ ಶೈಲಿ, ಬಸಪ್ಪ ಸೋಮಿಗಳು ಬಳಸುವ ಯಕ್ಷಗಾನದ ನಾಟಕೀಯ ಶೈಲಿ ಗುರು ಮದ್ವಾಚಾರ್ಯರರು ಮಾತನಾಡುವ ಸಂಸ್ಕೃತಿ ಅಣಕೆಯ ಕನ್ನಡ ಶೈಲಿ, ಹಳೇ ಬಾಕಿಯ ಸಾಬರು ಬೆಳೆಸುವ ದಖಿನಿ ಉರ್ದು ಶೈಲಿಯ ಕನ್ನಡ, ತ್ಯಾಗರಾಜರ ಕರ್ನಾಟಕ ಶಾಸ್ತ್ರೀಯ ಸಂಗೀತದ ಶೈಲಿಯ ವಿಡಂಬನಾತ್ಮಕ ಬಳಕೆ ಎಂದರೂ ಸಾಬರು ಹಾಗೂ ವಿದ್ಯಾವಂತ ಕನ್ನಡಿಗರೂ ಬಳಸುವ ಭಾಷೆಯೂ ಈ ಕಾದಂಬರಿಯಲ್ಲಿದೆ. ಎಲ್ಲಾ ಸಾಹಿತ್ಯವು ಭಾಷೆಯಲ್ಲಿ ನಡೆಯುವ ಪ್ರಯೋಗ ಎನ್ನುವುದು ನಿಜವಾಗುವುದಾದರೆ 'ಕುಸುಮ ಬಾಲೆ' ಕನ್ನಡ ಕಾದಂಬರಿ ಸಂದರ್ಭದಲ್ಲಿ ಒಂದು ಹೊಸ ಪ್ರಯೋಗ. ಈ ವೈವಿದ್ಯ ಮಯ ಶೈಲಿ ಕಾದಂಬರಿ ಪ್ರಕಾರವನ್ನು ಶ್ರೀಮಂತಗೊಳಿಸಿದೆ.

ದಲಿತ ಸಾಹಿತ್ಯಕ್ಕೆ ವೈಚಾರಿಕತೆ ಅಥವಾ ತಾತ್ವಿಕ ಹಿನ್ನೆಲೆ ಇಲ್ಲ ಎನ್ನುವವರಿಗೆ ಈ ಕಾದಂಬರಿ ಒಂದು ಉತ್ತರವಾಗಬಹುದು. ವೈಚಾರಿಕತೆ ಅಥವಾ ತಾತ್ವಿಕ ಹಿನ್ನೆಲೆಯಿಲ್ಲವೆಂಬ ಮಾತ್ರಕ್ಕೆ ದಲಿತರ ಬದುಕಿನಲ್ಲಿ ವೇದನೆ ಗಳಿಲ್ಲ, ಸಮಾಜದ ಬಲಾಢ್ಯ ಶಕ್ತಿಗಳೊಡನೆ ಸೆಣಸುವ ದುರಂತ ಅನುಭವವಿಲ್ಲ ಎಂದರ್ಥವಲ್ಲ. ಚೋಮನ ಬದುಕಿನ ಅಸದಾರಣ ದುರಂತವನ್ನು ಕಾರಂತರು 'ಚೋಮನದೊಡಿ' ಯಲ್ಲಿ ತೋರಿಸಿದ್ದಾರೆ. ದೇವನೂರರ ಸಾಹಿತ್ಯದಲ್ಲಿ ಬಂದಿರುವಂತಹ ಪಾತ್ರಗಳಾದ ಅಮಾಸ, ಗಾರಸಿದ್ಮಾವ ಇತ್ಯಾದಿಗಳು ಶತಮಾನಗಳ ವಿದ್ಯಾಭ್ಯಾಸವಿಲ್ಲದ ಪರಂಪರೆ ಯಲ್ಲಿ ಬೆಳೆದವರು. ಜ್ಞಾನ ಸಂಪಾದನೆಯಿಲ್ಲದೆ ಚಿಂತಕರ ಲಾಭವಿಲ್ಲದೆ ಬೆಳೆದು ಬಂದವರು : ವಿದ್ಯಾಭ್ಯಾಸದ ಲಾಭವಿಲ್ಲದೆ ಎಂಬತ್ತೊಂಬತ್ತರ ಸಮಕಾಲಿನ ಸಮಸ್ಯೆಗಳಲ್ಲಿ ಸಿಲುಕಿಕೊಂಡು ಈ ಸಮುದಾಯದ ಸಂವೇದನೆಗಳೇನು ? ಅವರ ಅಭಿವ್ಯಕ್ತಿಯೇನು ? ಭಾಷೆ ಯಾವುದಾಗಬೇಕು ? ಎನ್ನುವ ಸಮಸ್ಯೆಗಳನ್ನು ಯಾವ ಸಂಘ, ಘೋಷಣೆಗಳ ಸುಳಿಯಲ್ಲೂ ಸಿಕ್ಕದೆ ಸಾಹಿತ್ಯ ರಚಿಸಿರುವ ದೇವನೂರು ಮಹದೇವ ಅವರು ಆಡುಮಾತಿನ ಪರಂಪರೆಯನ್ನು ತಂತ್ರವಾಗಿ ಅಳವಡಿಸಿಕೊಳ್ಳುವುದರ ಮೂಲಕ ಅತ್ಯಂತ ಪರಿಣಾಮಕಾರಿಯಾಗಿ ಬಿಡಿಸಿಕೊಂಡಿದ್ದಾರೆ. ಪಾತ್ರಗಳ ಸೀಮಿತ ಪ್ರಜ್ಞೆ ಮತ್ತು ಆಯಾಮಗಳನ್ನು ಸರಳವಾದ ಆದರೆ ಸತ್ವಪೂರ್ಣ ಸಂಗೀತಮಯ ಭಾಷೆಯಲ್ಲಿಯೇ ಸೆರೆ ಹಿಡಿದಿದ್ದಾರೆ. ಸೂಕ್ಷ್ಮವಾಗಿ ಗಮನಿಸಿದರೆ ಈ ಭಾಷೆಯ ಲಯ ತಮಟೆ ಬಡಿತದ ಲಯಕ್ಕೆ ಹೊಂದಿಕೊಳ್ಳುವ ಭಾಷೆ ಎನ್ನವುದು ಗೊತ್ತಾಗುತ್ತದೆ. ಕಾದಂಬರಿಯಲ್ಲಿ ಹಲವಾರು ಆಧಾರಗಳು ಸಿಗುತ್ತವೆ. ಅಕ್ಕಮಹಾದೇವಮ್ಮ ಯಾಡ ಕಂದನ ಜೊತೆ ಬಂದು ಕುಳಿತಾಗ ಸಿದ್ದೂರನು

''ಈ ಬಂದು ಕುಂತವಳ ನೋಡಲು ಅವನ ತುಟಿ ಮಿಸ್ಗಳು

ತಮ್ಮಟ ಮುಂದ ಐಕಳು ಕುಣೀಯುವಂತೆ ಕುಣಿಯತೊಡಗಿದವು''[೬]

ಸಿದ್ಧೂರನ ಭಾವನೆಗಳೇ ಇರಲಿ ಬದುಕಿನ ಒಂದು ಮುಖ್ಯ ಗಳಿಗೆಯಲ್ಲಿ ಎದುರು ಕುಳಿತ ಹೆಣ್ಣಿನ ಬೇಡಿಕೆಗೆ ಅವನು ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುವುದು. ತಮಟೆಯ ಬಡಿತದ ಲಯದಲ್ಲಿ, ಮುಂದೆ ಯಾಡ ಹಳ್ಳಿಯ ದನ ಕರುಗಳನ್ನು ಜಾತ್ರೆಯಲ್ಲಿ ಮಾರಿ ಹಣ ತೆಗೆದುಕೊಂಡು ಬಂದಾಗ ಮಾತು ಅಡಗಿದವನಂತೆ.

''ಅವ್ವೋ, ಅವ್ವೋ, ಅಪ್ಪೋ, ಅಪ್ಪೋ .........'' ಎಂದು ಬೊಬ್ಬೆ ಹಾಕುತ್ತಾನೆ. ಮಾರಿ ಕುಣಿತದಲ್ಲಿ ತಮಟೆಯನ್ನು ಕಡ್ಡಿಯಲ್ಲಿ ಉಜ್ಜದಾಗ ಹೊರಡುವ ಶಬ್ದಕ್ಕೆ ಇದು ಹತ್ತಿರ ಬರುತ್ತದೆ. ನಂತರ ಯಾಡನಿಗೆ ಅವ್ವ ಹೊಡೆಯುವ ವಿವರಣೆಯಲ್ಲಿ '' ರಪ್ಪ, ರಪ್ಪ, ಗಟಸ್ತ'' ಎನ್ನುವುದು ತಮಟೆಯ ಬಡಿತದ ಶಬ್ದಕ್ಕೆ ಹೊಂದಿಕೊಳ್ಳುತ್ತದೆ. ಇನ್ನೂ ಒಂದು ಪದ್ಯ ಭಾಗವನ್ನು ಗಮನಿಸಿದರೆ ಈ ಅಂಶ ಸ್ಪಷ್ಟವಾಗುತ್ತದೆ.

'' ಯಾಡ ತಲ್ವ ಭೂಮಿ ಮ್ಯಾಲ ಇಟ್ಟವಳಾಗಿ

ಎದ್ದು ಅಕ್ಕಮಹಾದೇವಮ್ಮ ನಡೆದವಳಾಗಿ ಬಂದಳು.

ಆ ಕಣ್ಣೀರು ತುಂಬಿದ್ದ ಕೆರೆಯ ಕಡಗ, ಸರಣು

ಆ ಕೆರೆಗೆ ಮೂರು ಸಲ ಮಾಡಿದಳು. ಕಣ್ಣುಗ

ಆ ಕೆರೆಯ ನೀರ ಮೂರು ಸಲ ಒತ್ತಿಕೊಂಡಳು ಪ್ರಾತಿಸುತ

ಆ ಮೂರು ಬೊಗಸೆ ನೀರು ಕುಡ್ದಾಳು

ಸೆರಗೀನ ತುದಿಯಾ ನೀರಿಗದ್ದಿದಳೂ ''[೭]

ಇಲ್ಲಿ ಅಕ್ಕಮಹಾದೇವಮ್ಮ ಭೂಮಿ ಮತ್ತು ಭೂಮಿಯ ಜಲದಿಂದ ಯಾಡ ಮತ್ತು ತನ್ನನ್ನು ಪುನಃಶ್ಚೇತನಗೊಳಿಸುವ ರಿಚ್ಯುಅಲ್ ಮಾಡುತ್ತಿದ್ದಾಳೆ. ಭಾಷೆ ಅದಕ್ಕೆ ಸರಿಹೊಂದುವ ತಮಟೆಯ ಬಡಿತದ ಲಯದಲ್ಲಿದೆ. ಮುಂದೆ ಕೊಲೆಯಾಗಿರುವ ಚೆನ್ನನ ಅಪ್ಪ ಮಗನ ನಿರೀಕ್ಷೆಯಲ್ಲಿ ಹೀಗೆ ನುಡಿಯುತ್ತಾನೆ.

'' ಸಾಸ್ತ್ರ ಹೇಳಾನ್ನ ರೂಪ್ದಲಿ ಬರಬೌದು ..... ದಾಸಯ್ಯನ

ರೂಪದಲಿ ಬರಬೌದು ............ ಮಾಟ ಮಂತ್ರದವ್ನ ರೂಪದಲ್ಲಿ

ಬರಬೌದು ''[೮]

ಇಲ್ಲಿಯೂ ತಮಟೆಯ ಲಯ ನಮ್ಮ ಕಿವಿಗೆ ತಲುಪುತ್ತದೆ. ಅದಕ್ಕೆ ತಕ್ಕಂತೆ ಬರೆದಿದ್ದಾರೆ.

ಈ ರೀತಿಯಲ್ಲಿ ಕನ್ನಡ ಕಾದಂಬರಿಯ ಪ್ರಕಾರಕ್ಕೆ ಒಂದು ಹೊಸ ಲಯವನ್ನೇ ಕೊಟ್ಟಿದ್ದಾರೆ. ಓದಿನಲ್ಲಿ ಈ ಲಯದ ಸಂಪೂರ್ಣ ಅನುಭವ ಪಡೆಯಬೇಕಾದರೆ ಇಂಗ್ಲೀಷ್‌ನಲ್ಲಿ ಬಾಪ್‌ಕಿನ್ಸನ ಪದ್ಯಗಳನ್ನು ಓದುವಂತೆ ಗಟ್ಟಿಯಾಗಿ ಓದಬೇಕು. ಮನಸ್ಸಿನಲ್ಲಿ ಓದಿಕೊಂಡರೆ ಈ ಭಾಷೆಯ ತಾಳ ಮತ್ತು ಲಯ ಸಿಗುವುದಿಲ್ಲ.

ಅರವಿಂದ ಮಾಲಗತ್ತಿಯವರು ಬಳಸುವ ಭಾಷೆ ಧಾರವಾಡದ ಸುತ್ತಲಿನ ಉತ್ತರ ಕರ್ನಾಟಕದ ದಲಿತ ಜನರ ಭಾಷೆಯಾಗಿದ್ದು ಇದನ್ನು ನಾವು ಅವರ 'ಕಾರ್ಯ' ಕಾದಂಬರಿಯಲ್ಲಿ ನೋಡಬಹುದು. ಬಂಗಾರವ್ವಳ

---

೬. ದೇವನೂರು ಮಹಾದೇವ, ಕುಸುಮ ಬಾಲೆ, ಪುಸ್ತಕ ಪ್ರಕಾಶನ, ಮೈಸೂರು ೨೦೦೪, ಪುಟ - ೮

೭. ಅದೇ ಪುಟ - ೨೩

೮. ಅದೇ ಪುಟ - ೮೭

ಕಾರ್ಯಕ್ಕೆ ಹೋದಾಗ ಮಾರ್ಗ ಮಧ್ಯದಲ್ಲಿ ಕಾರ್ಯಕ್ಕೆ ಅಡ್ಡಿಯಾದಾಗ ಆಡುವ ಜನರ ಮಾತನ್ನು ಗ್ರಾಹಿಸಬೇಕು.

> '' ಮೂರು ಕೂಳು ಇಲ್ಲೆ ಆತವೊ
> ಆತಲ್ಲಾ ಬಿದ್ದಾಂಗ ಆಯಿತು ಎಲ್ಲಾರ ಬಾಯಾಗ ಬೂದಿ
> ದೊಡ್ಡವ್ರು ನಾವು ಹ್ಯಾಂಗಾರ ತಡೆದೆವೂ
> ಸಣ್ಣ ಮಕ್ಕಳು ಏನ್ ತಡಿಬೇಕು.
> ಹೌದು ಜಲ್ದ ಮುಗಿಸಿ ಹೋಗಬೇಕಂದ್ರ ಇದೇನಾತಲ್ಲಾ ''[9]

ಹೀಗೆ ಪಾತ್ರಗಳು ಮಾತನಾಡುವಾಗ ಮಾಲಗತ್ತಿಯವರು ಉತ್ತರ ಕರ್ನಾಟಕದ ದಲಿತ ಕೇರಿಯ ಭಾಷೆಯನ್ನು ಬಳಸಿದರೆ ನಿರೂಪಣೆ ಮಾಡುವಾದ ಶಿಷ್ಟ ಭಾಷೆಯನ್ನು ಬಳಸುತ್ತಾರೆ. ಆದರೆ ದೇವನೂರು ಮಹಾದೇವ ಅವರು ಕಥೆಯನ್ನು ಗ್ರಾಮ್ಯ ಭಾಷೆಯಲ್ಲಿಯೇ ನಿರೂಪಿಸುತ್ತಾರೆ.

ಸಿದ್ದಲಿಂಗಯ್ಯನವರ ಸಹ ಆಡುಮಾತಿನ ಶೈಲಿಯನ್ನೇ ತಮ್ಮ ಕವಿತೆಗಳಲ್ಲಿ ಬಳಸಿದರು.

> '' ಇಕ್ರಲಾ ವದರಿಲ್ಲಾ
> ಈ ನನ್‌ಮಕ್ಳ ಚರ್ಮ ಎಬ್ರಲಾ ''
> '' ಸೌದೆ ಸಿಗ್‌ದಂಗ್ ಸಿಗಿತೀನಿ ಸಾವ್ಕಾರಿಮಯ್ಯ
> ಕಳ್ಳು ಪಚ್ಚಿ ಬಗಿತಿನಿ, ಕುಟ್ತನಿ
> ಗಂಟ್ಲೊಳೆ ಕೊಬ್ಬ ''[10]

ಹೀಗೆ ಕವಿತೆಗೆ ಇರಬೇಕಾದ ಛಂದಸ್ಸು, ಪ್ರಾಸ, ಎಲ್ಲವನ್ನೂ ಬಿಟ್ಟು ಗ್ರಾಮ್ಯ ಜನರು ಮಾತನಾಡುವ ಭಾಷೆಯೇ ಕಾವ್ಯರೂಪ ತಾಳಿತು. ಸಿದ್ದಲಿಂಗಯ್ಯನವರು ಬಳಸಿದ ಭಾಷೆಯಲ್ಲಿ ಆವೇಶ, ಆಕ್ರೋಶ ವ್ಯಕ್ತವಾಗಿದ್ದು ದೇವನೂರರ ಭಾಷೆ ಸೌಮ್ಯರೂಪ ತಾಳಿದೆ.

ಹೀಗೆ ದಲಿತ ಸಾಹಿತ್ಯದಲ್ಲಿ ಗ್ರಾಮ್ಯ ಭಾಷೆ, ಶಿಷ್ಟ ಭಾಷೆಯ ಮೇಲೆ ಸವಾರಿ ಮಾಡುವ ಅವಕಾಶ ಪಡೆಯಿತು. ಹಿಂದಿನಿಂದ ಸಾಹಿತ್ಯದಲ್ಲಿ  ಭಾಷೆಯನ್ನು ಬಳಸುತ್ತಿದ್ದರು. ಆದರೆ ದಲಿತ ಸಾಹಿತಿಗಳು ತಮಗೆ ಬೇಕಾದ ರೀತಿ ಭಾಷೆಯನ್ನು ದುಡಿಸಿಕೊಂಡರು. ಗ್ರಾಮ್ಯಭಾಷೆಯಾದರೂ ಯಾವ ಶಿಷ್ಟ ಭಾಷೆಗೆ ಕಮ್ಮಿ ಇಲ್ಲ ಎನ್ನುವಹಾಗೆ ಭಾಷೆ ಬಳಕೆಯಾಗಿ ವಿಶಿಷ್ಟ ಸಾಹಿತ್ಯ ರೂಪುಗೊಂಡು ಓದುದರ ಮನ್ನಣೆಯನ್ನು ಗಳಿಸಿತು.

---

೯. ಅರವಿಂದ ಮಾಲಗತ್ತಿ : ಕಾರ್ಯ, ಶೈಲ ಪ್ರಕಾಶನ, ಮುದ್ದೆಬಿಹಾಳ, ೧೯೯೦, ಪುಟ - ೫೭
೧೦. ಸಿದ್ದಲಿಂಗಯ್ಯ : ಮೆರವಣಿಗೆ, ಅಂಕಿತ ಪುಸ್ತಕ, ಬೆಂಗಳೂರು ೨೦೦೦, ಪುಟ - ೫೮

# ಉಪ ಸಂಹಾರ

ಪ್ರಸ್ತುತ ದಲಿತ ಸಾಹಿತ್ಯವು ಜನಪರವಾಗಿ ಬೆಳೆಯುತ್ತದೆ. ಸಾಮಾಜಿಕ ನ್ಯಾಯ, ಸಮಾನತೆ ಮತ್ತು ಸ್ವಾತಂತ್ರ್ಯವನ್ನು ಅದು ಸದಾ ಗೌರವಿಸಿಕೊಂಡು ಬಂದಿದೆ. ಈ ಸಾಹಿತ್ಯ ಮಾನವೀಯತೆಯ ಪ್ರಣಾಳಿಕೆಯೂ ಆಗಿದ್ದು, ಮಾನವನಿಗೆ ಘನತೆ ಮತ್ತು ಗೌರವಗಳನ್ನು ತಂದುಕೊಡುವ ಪ್ರಕ್ರಿಯೆಯು ಆಗಿದೆ. ಅದು ಕನ್ನಡ ದಲಿತ ಸಾಹಿತ್ಯದ ಅನೇಕ ಕೃತಿಗಳಲ್ಲಿ ವ್ಯಕ್ತವಾಗಿದೆ. ಮಾನವನನ್ನು ಮಾನವೀಯ ನೆಲೆಯಿಂದ ನೋಡಬೇಕು ಎಂಬುದು ದಲಿತ ಸಾಹಿತ್ಯದ ಮೂಲ ಆಶಾಯವಾಗಿದೆ.

ದಲಿತ ಸಾಹಿತ್ಯದ ಮತ್ತೊಂದು ಆಶಾಯ ಪ್ರತಿಭಟನೆ. ಅದು ಕನ್ನಡ ದಲಿತ ಸಾಹಿತ್ಯದಲ್ಲಿ ಬಹಳ ಖಚಿತವಾಗಿ ಕಾಣಿಸಿಕೊಂಡಿದೆ. ಹಿಂದಿನ ಸಾಹಿತ್ಯದಲ್ಲಿ ಪ್ರತಿಭಟನೆ ಒಂದು ಬಿಡಿ ಅಂಶವಾಗಿ ಕಾಣಿಸಿಕೊಂಡಿತ್ತು. ಆದರೆ ದಲಿತ ಸಾಹಿತ್ಯವು ಇದಿಯಾಗಿಯೇ ಒಂದು ಪ್ರತಿಭಟನೆಯಾಗಿದೆ. ವ್ಯವಸ್ಥೆಯ ಬಗ್ಗೆ ಗಿನ ಅಸಮಧಾನದಿಂದಲೇ ಅದು ಹುಟ್ಟಿದೆ. ಕ್ರಾಂತಿ ಕನಸನ್ನು ಹೊತ್ತಿದೆ. ಇಲ್ಲಿಯ ಪ್ರತಿಭಟನೆಯ ವಿಶ್ಲೇಷಣೆ ಇಡೀ ಸಾಹಿತ್ಯ ಚಳುವಳಿಯ ವಿಶ್ಲೇಷಣೆಯೇ ಆಗುತ್ತದೆ. ಜೊತೆಗೆ ಸಾಂಪ್ರದಾಯಿಕ ಅರ್ಥದ ಪ್ರತಿಭಟನೆಗೂ, ಆಧುನಿಕ ಅರ್ಥದ ಪ್ರತಿಭಟನೆಗೂ ವ್ಯತ್ಯಾಸವಿದೆ ಎಂಬುದನ್ನು ಇಲ್ಲಿ ಮರೆಯುವಂತಿಲ್ಲ. ಜಗತ್ತಿನ ಆಧುನೀಕರಣ, ಜಾಗತೀಕರಣದ ಸಂದರ್ಭಗಳು ಸಂಕೀರಣವು ಬದಲಾಗುತ್ತಾ ಹೋಗುವಂತಾಗಿದ್ದು ಅಲ್ಲಿ ಸಾಂಪ್ರದಾಯಿಕ ಅರ್ಥದ ಕುಟುಂಬ, ಜಾತಿ, ಸಮುದಾಯ, ಧಾರ್ಮಿಕ, ಅಧಾರ್ಮಿಕ ಮುಖಂಡರು ಇತ್ಯಾದಿಗಳು ತನ್ನ ಅಸ್ತಿತ್ವ ಕಳೆದುಕೊಳ್ಳುತ್ತವೆ. ವೈಜ್ಞಾನಿಕ ಕ್ಷೇತ್ರದ ಕ್ಷಿಪ್ರ ಬೆಳವಣಿಗೆಯು ಆಧುನಿಕ ಪ್ರಟಿಭಟನೆಗೆ ಬಲವಾದ ಪ್ರೇರಣೆಯನ್ನು ಮತ್ತು ತಾತ್ವಿಕ ತಳಹದಿಯನ್ನೂ ಒದಗಿಸಿದೆ. ಈ ಅರ್ಥದಲ್ಲಿ ದಲಿತ ಪ್ರತಿಭಟನೆಯೂ ಮಾನವೀಯ ಸಾಧ್ಯತೆಗಳ ಪರ್ಯಾಯ ಶೋಧನೆಯು ಆಗಿದೆ.

ಹೀಗೆ ತಮ್ಮ ಅಸ್ತಿತ್ವಕ್ಕಾಗಿ ಹುಡುಕಾಟ ನಡೆಸುವವರು ರಚಿಸಿರುವ ಸಾಹಿತ್ಯದಲ್ಲಿ ಅನಾವರಣಗೊಂಡಿರುವ ಪ್ರತಿಭಟನೆಗೆ ಎರಡು ಮುಖ್ಯ ಮಜಲುಗಳು ಇರುತ್ತವೆ.

೧. ತಾನು ಹುಟ್ಟಿ ಬೆಳೆದ ಸಮಾಜದಲ್ಲಿ ತನ್ನ ಅನುಭವಕ್ಕೆ ಬಂದ ಶೋಷಣೆಯ ವನಿವರಗಳನ್ನು ತಿಳಿಯಪಡಿಸುವುದು. ಇಲ್ಲಿ ಬರಹಗಾರನು ಶೋಷಿತ ಮತ್ತು ಶೋಷಕ ವರ್ಗದ ಮಧ್ಯೆ ಬದುಕುತ್ತಾನೆ. ಅತನ ಪ್ರತಿಭಟನೆಯೂ ಶೋಷಕ ವರ್ಗದ ವಿರುದ್ಧವಾಗಿರುವುದರಿಂದ ಸಹಜವಾಗಿ ಸಿಟ್ಟು, ಆಕ್ರೋಶದಿಂದ ಕೂಡಿರುತ್ತದೆ. ಹಾಗಾಗಿಯೇ ಅದು ಆ ವರ್ಗದ ಜನರ ಅಸಮಾಧಾನಕ್ಕೂ, ವಿರೋದಕ್ಕೂ ಕಾರಣವಾಗುತ್ತದೆ. ಹಾಗೂ ಇದಕ್ಕೆ ವಿರುದ್ಧವಾಗಿ ಶೋಷಿತ ವರ್ಗದ ಪರವಾಗಿ ಅತ ಬರೆಯುವುದರಿಂದ ಆ ವರ್ಗದಲ್ಲಿ ಅದು ಆತ್ಮಾಭಿಮಾನವನ್ನು ಹುಟ್ಟಿಸುತ್ತದೆ. ಅವರ ಸ್ವಾಭೀಮಾನವು ಹೆಚ್ಚುವಲ್ಲಿ ಸಹಾಯಕಾರಿಯಾಗುತ್ತದೆ. ಅಂದರೆ ದಲಿತ ಸಾಹಿತಿಗಳು ನೊಂದವರ, ಕೆಳಗೆ ಬಿದ್ದವರ ದನಿಯಾಗುವ ಸಾಹಸಕ್ಕಿಳಿದರು. ಇಲ್ಲಿ ಬರಹದ ಹುಟ್ಟಿಗೆ ಕಾರಣ ಮತ್ತು ಅದು ಚಲಿಸುವ ದಿಕ್ಕು ಪರಸ್ಪರ ಎದುರು - ಪದುರಾಗಿದೆ. '' ಬರೆಯುವವನೀಗ ಇನ್ನೊಬ್ಬರಿಗೆ ಅಂದರೆ ತಾನು ಯಾರಿಗೆ ದಣಿಯೋ ಅವರಲ್ಲದ ಇನ್ನೊಬ್ಬರಿಗೆ ತನ್ನ ಕೋಪ, ಕಟಕಿ, ದಿಕ್ಕಾರ, ಆಸೆ, ಕನಸುಗಳನ್ನು ರವಾನಿಸಲು ತಲುಪಿಸಲು ನಿಂತವನಾಗಿ ಬಿಡುತ್ತಾನೆ ''[೧]. ಇಲ್ಲಿ ಪ್ರತಿಭಟನೆಯ ಮಾಧ್ಯಮವಾಗಿ ಸಾಹಿತಿಗಳು ಕೆಲಸ ಮಾಡುತ್ತಾರೆ. ಬಹುಶಃ ಇದು ಬಂಡಾಯ, ದಲಿತ ಸಾಹಿತಿಗಳ ಸೃಜನಶೀಲ ಸಾಧ್ಯತೆಯನ್ನೇ ಒಂದು ಮೀತಿಗೊಳ್ಳಪಡಿಸಿದೆ.

---

೧. ಡಾ. ಕೆ.ವಿ. ನಾರಾಯಣ : ತೊಡಕುಗಳ ಹೂದ್ರ, ಅಕ್ಷರ ಪ್ರಕಾಶನ ಸಾಗರ ೧೯೮೮, ಪುಟ - ೩೧

ಈ ರೀತಿ ಕನ್ನಡ ದಲಿತ ಸಾಹಿತ್ಯದಲ್ಲಿ ಪ್ರತಿಭಟನೆಯನ್ನು ಅಭಿವ್ಯಕ್ತ ಪಡಿಸಿದವರಲ್ಲಿ ಸಿದ್ಧಲಿಂಗಯ್ಯ, ಗೋವಿಂದಯ್ಯ, ಇಂದೂಧರ ಹೊನ್ನಾಪುರ, ಚೆನ್ನಣ್ಣ ವಾಲೀಕಾರ, ಅರವಿಂದ ಮಾಲಗತ್ತಿ, ಮುನಿವೆಂಕಟಪ್ಪ ಮೊದಲಾದವರು ಪ್ರಮುಖರು. ಇವರೆಲ್ಲರೂ ಅಸಮಾನತೆಯ ವಿರುದ್ಧ ಬಲವಾದ ಕೂಗೆಬ್ಬಿಸಿದ್ದಾರೆ. ಆಕ್ರೋಶವೇ ಇವರ ಪ್ರತಿಭಟನೆಯ ಸಾರ ಸರ್ವಸ್ವ. ಆದರೆ ಆಕ್ರೋಶದ ಪರಮಾವಧಿಯಲ್ಲಿ ಇವರೆಲ್ಲಾ ಒಂದೇ ಆಗಿಬಿಡುತ್ತಾರೆ. ಇವರೆಲ್ಲರ ಪ್ರತಿಭಟನಾತ್ಮಕ ಕವನಗಳನ್ನು ಓದಿದ ನಂತರ ಒಂದೇ ಕವನವನ್ನು ಓದಿದ ಅನುಭವವಾಗುತ್ತದೆ. ಇವರೆಲ್ಲರ ಮನಸ್ಸು ತಮ್ಮನ್ನು ಶೋಷಣೆಗೆ ಒಳಪಡಿಸಿದ ಮಂಡಿಯನ್ನು ವಿರೋಧಿಸುವುದಕ್ಕೆ ಸೀಮಿತವಾಗಿದೆ. ರಾಜಕಾರಣಿಗಳು, ಬಂಡವಾಳ ಸಾಹಿಗಳು, ಹಳ್ಳಿಯ ಪಟೇಲರು, ಗೌಡರು, ಪುರೋಹಿತರು ಇವರ ಮುಖ್ಯ ಶತ್ರುಗಳು. ಅವರಿಗೆ ಪ್ರತಿಕ್ರಿಯಿಸುತ್ತಾ ಅವರ ಬಗ್ಗೆ ಬೇರೆಯವರಿಗೆ ಹೇಳಲು ಹೋರಟ ಸೃಜನಶೀಲತೆಯ ನೆಲೆಗಳಿರುವುದೇ ಇವರು ಯಾರನ್ನು ವಿರೋಧಿಸುತ್ತಾರೋ ಅವರಲ್ಲಿ, ಅಂದರೆ ಬಡವರು, ದಲಿತರ ವಿರೋಧಿಗಳಿಗೆ ತಿರುಗು ಬೀಳಲು ಮಾತ್ರ ಇವರ ಪ್ರತಿಭೆ ಸೀಮಿತಗೊಂಡಿದೆ. ಬದಲಾಗಿ ಬದುಕನ್ನು ನೆಲೆಯಾಗಿಸಿಕೊಂಡು ಇತರರನ್ನು ವಿಮರ್ಶಿಸುತ್ತಾ ಮುಂದೆ ಸಾಗಿದ್ದರೆ ಇವರೆಲ್ಲರ ಪ್ರತಿಭಟನೆಗೆ ಇನ್ನೂ ಸ್ಪಷ್ಟವಾದ ಅರ್ಥ ಬರುವಂತಿತ್ತು.

ಇವರೆಲ್ಲರೂ ಸಮುದಾಯ ನಿಷ್ಠವಾದ ಸಾಹಿತ್ಯ ರಚನೆ ಮಾಡಿದವರು. ಒಬ್ಬ ನಾಯಕನಲ್ಲಿ ವಿಶ್ವಾಸವಿರಿಸದೆ ಜನರಲ್ಲಿ ವಿಶ್ವಾಸವಿರಿಸಿದ ಬರಹಗಾರರು. ಇವರು ಬೇರೆಯವರಿಗೆ ಕ್ರಾಂತಿಯ ಉಪನ್ಯಾಸ ಮಾಡಲು ಕಾದು ಕುಳಿತ್ತಿರುತ್ತಾರೆ. ಈ ರೀತಿಯ ಹೊಸ ಎಚ್ಚರಗಳಿಂದಾಗಿ ಅನೇಕರು ತಮ್ಮ ಮನೆಯವರಿಗೆ ತಮ್ಮ ಸುತ್ತಮುತ್ತಲಿನ ಜನ ಸಮುದಾಯಕ್ಕೆ ಅಪರಿಚಿತರಾಗಿಬಿಟ್ಟದ್ದಾರೆ. ನೈಜ ಜೀವನದ ಅನುಭವದಿಂದ ವಂಚಿತರಾದವರೂ ಇದ್ದಾರೆ.

ಉಷಾ, ವಿಜಯದಬ್ಬೆ, ಗುಡಿಬಂಡೆ ಪೂರ್ಣಿಮಾ, ಕಮಲ ಹೆಮ್ಮಿಗೆ, ಮುಕ್ತಾಯಕ್ಕ, ಆರ್. ಪ್ರತಿಭಾ, ಮಾಧವಿ ಭಂಡಾರಿ, ಎನ್.ವಿ. ಭಾಗ್ಯಲಕ್ಷ್ಮಿ, ಬಿ.ಟಿ.ಲಲಿತಾನಾಯಕ್, ಮಾಲತಿ ಪಟ್ಟಣ ಶೆಟ್ಟಿ, ಶಶಿಕಲಾ ವಸ್ತ್ರದ ಮೊದಲಾದ ಮಹಿಳಾ ಬರಹಗಾರ್ತಿಯರಲ್ಲಿಯೂ ಏಕ ಮುಖ ಪ್ರತಿಭಟನೆ ಕಂಡು ಬರುವುದರಿಂದ ಹೆಚ್ಚು ಮನ್ನಣೆಗಳಿಸಲು ಸಾದ್ಯವಾಗಲಾರದು.

ಕಾವ್ಯದಲ್ಲಿ ಕಾಣುವ ಇಂತಹ ಪ್ರತಿಭಟನೆಯ ಅಂಶಗಳು ದಲಿತ ಸಾಹಿತ್ಯದ ಇತರ ಪ್ರಕಾರಗಳಲ್ಲಿಯೂ ಕಂಡು ಬರುತ್ತವೆ. ಇಂಧೂದರ ಹೊನ್ನಾಪುರ, ಜಾಣಗೆರೆ ವೆಂಕಟರಾಮಯ್ಯ, ಚೆನ್ನಣ್ಣ ವಾಲೀಕರ, ಅರವಿಂದ ಮಾಲಗತ್ತಿ ಮೊದಲಾದವರ ಸಣ್ಣ ಕಥೆ, ಕಾದಂಬರಿಗಳಲ್ಲಿಯಾ ನಾಯಕರೆಲ್ಲರೂ ಶೋಷಣೆಯ ವಿರುದ್ಧ ಪ್ರತಿಭಟನೆಯ ದನಿ ಎತ್ತಿದ್ದಾರೆ. ಪೂರ್ವಗ್ರಹ ಪೀಡಿತ ಚೌಕಟ್ಟುಗಳೊಂದಿಗೆ ಪ್ರಜ್ಞಾಪೂರ್ವಕವಾಗಿ ಮೂಡಿಬಂದ ಕಲಾಕೃತಿಗಳು ಬಹುಮಟ್ಟಿಗೆ ಏಕತಾನತೆಯಿಂದ ಕೂಡಿವೆ. ಪ್ರತಿಭಟನೆಯ ಸಾಮುದಾಯಿಕತೆಯೇ ಇಲ್ಲಿ ಮುಖ್ಯ ಅಂಶ.

೨. ಎರಡನೇ ರೀತಿಯ ಪ್ರತಿಭಟನೆಯ ನೆಲೆಗಳು ಮೊದಲಿನದಕ್ಕಿಂತ ಹೆಚ್ಚು ಪ್ರೌಢವೂ, ಕಲಾತ್ಮಕವೂ ಆಗಿವೆ. ಇಲ್ಲಿ ಬೇರೆಯ ವರ್ಗದವರ ವಿರುದ್ಧ ಹೇಳುವ ತವಕವಿಲ್ಲ. ಹೇಳಲೇಬೇಕೆಂಬ ಆತುರವಿಲ್ಲ. ಬದಲು ತನ್ನ ವರ್ಗದಲ್ಲಿಂದ ಬೇರ್ಪಟ್ಟು ಆತ ಮತ್ತೆ ತನ್ನವರ ಕಡೆಗೆ ತಿರುಗಿ ಅವರಿಗೆ ತಮ್ಮ ಬಗ್ಗೆ ಹೇಳುತ್ತಾನೆ. ಇಲ್ಲಿ ಆವೇಶವಿಲ್ಲ, ಆಕ್ರೋಶವಿಲ್ಲ, ಕೂಗಾಟವಿಲ್ಲ. ಬದಲು ಮಾನವೀಯ ಮಾತುಗಾರಿಕೆ ಇದೆ. ನಾವು ಅದನ್ನು ಕೇಳಬೇಕಾದರೆ ಹೇಳುವವನ ಬೆನ್ನ ಹಿಂದೆಯೇ ಆಲಿಸಬೇಕಾಗುತ್ತದೆ. ಪ್ರಧಾನ ಸಂಸ್ಕೃತಿ ನಿರಾಕರಿಸಿದ ಮೌಲ್ಯಗಳ ಬಗ್ಗೆ ಅದೇ ಸಂಸ್ಕೃತಿ

ಯಿಂದ ಬಂದವನು ಹೇಳುವುದನ್ನು ಅರ್ಥಮಾಡಿಕೊಳ್ಳಬೇಕು. ನಮ್ಮ ಪರಂಪರೆ ಯಾವುದನ್ನು ಪೂರ್ಣ ಮೈಲಿಗೆ ಎಂದು ಮಾನ್ಯ ಮಾಡಿತು, ಆ ಮೈಲಿಗೆಯೇ ಇಲ್ಲಿ ಅಕ್ಷರದ ಮೂಲ ದಾಖಲೆಯಾಗುತ್ತದೆ. ಈ ರೀತಿಯ ದಾಖಲಿಸುವಿಕೆಯೂ ಒಂದು ರೀತಿಯ ಪ್ರತಿಭಟನೆಯಾಗಿದೆ.

ಈ ವರ್ಗದ ಉತ್ಕೃಷ್ಟ ಬರಹಗಾರರಾಗಿ ದೇವನೂರು ಮಹದೇವ ಅವರು ಪ್ರಮುಖರು. ಮೊದಲನೇ ರೀತಿ ಆಕ್ರೋಶಭರಿತ ಪ್ರತಿಭಟನೆಯಲ್ಲಿರುವ ದೋಷಗಳಿಂದ ಮುಕ್ತವಾದವರು. ಇಲ್ಲಿನ ಪ್ರತಿಭಟನೆಗೆ ಸಾಹಿತ್ಯಕವಾಗಿ ನ್ಯಾಯ ಸಿಕ್ಕಿದೆ. ಈ ರೀತಿ ಅವರ ಬರವಣಿಗೆಗಳಿಗೆ ಎರಡು ರೀತಿಯ ಗುಣಗಳಿವೆ. ೧) ಕೆಳವರ್ಗದ ಜಾತಿಯ ದಟ್ಟದಾರುಣ ಸ್ಥಿತಿಯನ್ನು ಯಥಾವತ್ತಾಗಿ ದಾಖಲಿಸುವುದು ; ೨) ಅದೇ ವರ್ಗದೊಳಗೆ ಅಡಗಿರುವ ಅಪಾರ ಸೃಜನಶೀಲ ಶಕ್ತಿ ಮತ್ತು ಸಾಮರ್ಥ್ಯವನ್ನು ಆ ಜನರ ಕನಸುಗಳನ್ನೂ ಪ್ರದರ್ಶಿಸುವುದು. ದೇವನೂರರು ಈ ಕೆಲಸವನ್ನು ಸಮರ್ಥವಾಗಿ ನಿರ್ವಹಿಸಿದ್ದಾರೆ. ಅವರ ಕಥೆ ಕಾದಂಬರಿಗಳಲ್ಲಿ ಎಲ್ಲೂ ಆಕ್ರೋಶ, ಆವೇಶ, ಉದ್ಗಾರಗಳು ಕಾಣಿಸುವುದಿಲ್ಲ. ಅವರು ತಮ್ಮ ಸಮುದಾಯದ ದಾರುಣ ಬದುಕಿನ ಸ್ಥಿತಿಯನ್ನು ಯಥಾವತ್ತಾಗಿ ದಾಖಲಿಸಿ ಅವರಿಗೇ ತೋರಿಸುತ್ತಾರೆ. ಇವರ ಸಾಹಿತ್ಯ ನೆಲೆಯು ದಲಿತಲೋಕದ ಒಳಗೇ ಇದೆ. ಆದ್ದರಿಂದಲೇ ಬೇರೆಯವರೆಲ್ಲರಿಗಿಂತ ಪ್ರಮುಖ ಮತ್ತು ಉನ್ನತ ಸ್ಥಾನದಲ್ಲಿ ನಿಲ್ಲುತ್ತಾರೆ.

ಒಟ್ಟಾರೆ ದಲಿತ ಸಾಹಿತ್ಯ ಚಳುವಳಿಯ ಆರಂಭ ಕಾಲದ ಬರಹಗಾರರಲ್ಲಿ ಸಿದ್ಧಲಿಂಗಯ್ಯ, ಅರವಿಂದ ಮಾಲಗತ್ತಿ, ಗೋವಿಂದಯ್ಯ, ಇಂದೂಧರ ಹೊನ್ನಾಪುರ, ಚೆನ್ನಣ್ಣ ವಾಲಿಕಾರ, ಮುಂತಾದವರಲ್ಲಿ ಪ್ರತಿಭಟನೆ ಏಕಮುಖವಾಗಿದ್ದು ಸಮಗ್ರ ನಿಷ್ಠೆಯ ಚಿಂತನೆಗಳಿಂದ ವಂಚಿತರಾದುದು. ಆದರೆ ದೇವನೂರರ ಬರವಣಿಗೆಗಳಲ್ಲಿ ಈ ರೀತಿಯ ಏಕತಾನತೆ ಇರದೇ ಒಂದು ಸಮುದಾಯದ ಸಮಗ್ರ ಬದುಕಿನ ಚಿತ್ರಣವಿದ್ದು ದಾಖಲೆಯಲ್ಲೂ, ಪ್ರತಿಭಟನೆ ಪರೋಕ್ಷವಾಗಿದೆ.

ಒಟ್ಟನಲ್ಲಿ ದಲಿತ ಸಾಹಿತ್ಯದಲ್ಲಿ ಸಮಾಜ ನಿಷ್ಠ, ನೈತಿಕ, ಆರ್ಥಿಕ, ಮಾನವೀಯ ನೆಲೆಯ ಸಾಹಿತ್ಯ ರಚನೆಗೆ ಬರಹಗಾರರು ಸಜ್ಜಾಗಿರುವುದು ಕಾಣುತ್ತದೆ. ಎಪ್ಪತ್ತರ ದಶಕದಲ್ಲಿ ಆರಂಭವಾದ ಈ ದಲಿತ ಸಾಹಿತ್ಯ ಚಳುವಳಿ ಎಂಬತ್ತರ ದಶಕದ ವೇಳೆಗೆ ಹೆಚ್ಚು ಪ್ರಜ್ವಲವಾಯಿತು. ದಲಿತ ಸಂಘರ್ಷ ಸಮಿತಿ, ದಲಿತ ಲೇಖಕರ ಸಂಘ, ಮುಂತಾದ ಸಂಘಗಳಿಂದ ಚಳುವಳಿ ತೀವ್ರವಾಗಿ ತಮ್ಮ ಹಕ್ಕಿಗಾಗಿ ಹೋರಾಟ ನಡೆಸಿದ ದಲಿತರು ಶಿಕ್ಷಣ ಪಡೆದು ಸ್ಥಿತಿವಂತರಾಗಲು ಯತ್ನಿಸಿದರು. ಈ ಕಾಲಘಟ್ಟದಲ್ಲಿನ ಬರಹಗಾರರು ತಾವು ಹುಟ್ಟಿಬಂದ ನೆಲೆಯನ್ನು ಪರಿಶೀಲಿಸುವ ಕೆಲಸ ಮಾಡಿದ್ದರಿಂದ ಅವರ ಸಾಹಿತ್ಯವನ್ನು ಓದಿದ ಸಹೃದಯರು ಚಳುವಳಿಯಲ್ಲಿ ಸಕ್ರೀಯವಾಗಿ ಪಾಲ್ಗೊಂಡರು. ಇದರಿಂದ ಹಲವಾರು ಕೃತಿ ರಚನೆಯಾಯಿತು. ಅವು ಕನ್ನಡ ಸಾಹಿತ್ಯ ಸಂದರ್ಭದಲ್ಲಿಯೇ ಮಹತ್ವದ ಕೃತಿಗಳಾಗಿವೆ. ಈ ಚಳುವಳಿಯಿಂದ ದಲಿತರು, ಮಹಿಳೆಯರು ಮತ್ತು ಮುಸ್ಲಿಂಮರು ಹೆಚ್ಚಿನ ಸಂಖ್ಯೆಯಲ್ಲಿ ಬರೆಯಲು ಆರಂಭಿಸಿದರು. ಅದು ತೊಂಬತ್ತರ ದಶಕದ ವರೆವಿಗೂ ಚಲನಶೀಲವಾಗಿದ್ದು ನಂತರದಲ್ಲಿ ಹೆಚ್ಚು ಕ್ರೀಯಾ ಶೀಲವಾಗದೇ ಪ್ರಸ್ತುತ ನಿಂತ ನೀರಾಗಿದೆ. ಇದಕ್ಕೆ ಆನೇಕ ಕಾರಣಗಳಿರಬಹುದು. ಆದರೂ ಮಹಿಳಾ ಮತ್ತು ಮುಸ್ಲಿಂ ಸಂವೇದನೆಯ ಮೂಲಕ ಮುಂದುವರೆದಿರುವುದು ಶ್ಲಾಘನೀಯವಾಗಿದೆ.

---

# ಗ್ರಂಥಋಣ


ಪ್ರಧಾನ ಗ್ರಂಥಗಳು :

| | |
|---|---|
| ೧. ಡಾ. ಸಿದ್ಧಲಿಂಗಯ್ಯ | ಮೆರವಣಿಗೆ<br>ಪ್ರಕಾಶಕರು :<br>ಅಂಕಿತ ಪುಸ್ತಕ, ಬಸವನಗುಡಿ, ಬೆಂಗಳೂರು<br>ವರ್ಷ : ೨೦೦೦ |
| ೨. ಡಾ. ಸಿದ್ಧಲಿಂಗಯ್ಯ | ಸಾವಿರಾರು ನದಿಗಳು<br>ಪ್ರಕಾಶಕರು :<br>ಕನ್ನಡ ಸಂಸ್ಕೃತಿ ನಿರ್ದೇಶನಾಲಯ<br>ನೃಪತುಂಗ ರಸ್ತೆ, ಬೆಂಗಳೂರು<br>ವರ್ಷ : ೧೯೮೫ |
| ೩. ಅರವಿಂದ ಮಾಲಗತ್ತಿ | ಕಪ್ಪು ಕಾವ್ಯ<br>ಪ್ರಕಾಶಕರು :<br>ಹೊಸದಿಕ್ಕು ಪ್ರಕಾಶನ, ಬೆಂಗಳೂರು<br>ವರ್ಷ : ೧೯೮೫ |
| ೪. ಅರವಿಂದ ಮಾಲಗತ್ತಿ | ಮೂಕನಿಗೆ ಬಾಯಿ ಬಂದಾಗ<br>ಪ್ರಕಾಶಕರು :<br>ಹೊಸದಿಕ್ಕು ಪ್ರಕಾಶನ, ಬೆಂಗಳೂರು<br>ವರ್ಷ : ೧೯೮೫ |
| ೫. ಡಾ. ಎಚ್.ಎಸ್. ರಾಘವೇಂದ್ರರಾವ್ | ಅರವಿಂದ ಮಾಲಗತ್ತಿಯವರ ಆಯ್ದ ಕವನಗಳು<br>ಪ್ರಕಾಶಕರು :<br>ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು<br>ವರ್ಷ : ೨೦೦೪ |
| ೬. ಡಾ. ಮುನಿವೆಂಕಟಪ್ಪ | ಕೆಂಡದ ನಡುವೆ<br>ಪ್ರಕಾಶಕರು :<br>ವಿಚಾರವಾದಿ ಪ್ರಕಾಶನ, ಸರಸ್ವತಿಪುರಂ, ಮೈಸೂರು<br>ವರ್ಷ : ೧೯೯೩ |
| ೭. ಮುಳ್ಳೂರು ನಾಗರಾಜ | ನೆಲದ ಜೋಗುಳ<br>ಪ್ರಕಾಶಕರು :<br>ವಿಚಾರವಾದಿ ಪ್ರಕಾಶನ, ಸರಸ್ವತಿಪುರಂ, ಮೈಸೂರು<br>ವರ್ಷ : ೧೯೯೩ |

| | | |
|---|---|---|
| ೮. | ದೇವನೂರು ಮಹಾದೇವ | ದ್ಯಾವನೂರು ಮತ್ತು ಒಡಲಾಳ<br>ಪ್ರಕಾಶಕರು :<br>ನವ್ವಾಲೆ ಪ್ರಕಾಶನ, ಕುವೆಂಪುನಗರ, ಮೈಸೂರು<br>ವರ್ಷ : ೧೯೯೫ |
| ೮. | ದೇವನೂರು ಮಹಾದೇವ | ಒಡಲಾಳ<br>ಪ್ರಕಾಶಕರು :<br>ನವ್ವಾಲೆ ಪ್ರಕಾಶನ, ಕುವೆಂಪುನಗರ, ಮೈಸೂರು<br>ವರ್ಷ : ೨೦೦೩ |
| ೧೦. | ದೇವನೂರು ಮಹಾದೇವ | ಕುಸುಮ ಬಾಲೆ<br>ಪ್ರಕಾಶಕರು :<br>ಪುಸ್ತಕ ಪ್ರಕಾಶನ, ಸರಸ್ವತಿಪುರಂ, ಮೈಸೂರು<br>ವರ್ಷ : ೨೦೦೪ |
| ೧೧. | ಅರವಿಂದ ಮಾಲಗತ್ತಿ | ಕಾರ್ಯ<br>ಪ್ರಕಾಶಕರು :<br>ಶೈಲಾ ಪ್ರಕಾಶನ, ಅಂಬೇಡ್ಕರ್ ರಸ್ತೆ, ಮುದ್ದೇಬಿಹಾಳ<br>ವರ್ಷ : ೧೯೯೦ |
| ೧೨. | ಶಿವರುದ್ರಯ್ಯ ಕಲ್ಲೋಳಿಕರ್ | ಹೊಲಗೇರಿಯ ರಾಜಕುಮಾರ<br>ಪ್ರಕಾಶಕರು :<br>ಅಂಕಿತ ಪುಸ್ತಕ, ಬಸನವಗುಡಿ, ಬೆಂಗಳೂರು<br>ವರ್ಷ : ೧೯೯೫ |
| ೧೩. | ಡಾ. ಮ.ನ. ಜವರಯ್ಯ | ಮಾಗಿ<br>ಪ್ರಕಾಶಕರು :<br>ಸಿದ್ಧಾರ್ಥ ಗ್ರಂಥಮಾಲೆ, ಕುವೆಂಪುನಗರ, ಮೈಸೂರು<br>ವರ್ಷ : ೧೯೯೯ |
| ೧೪. | ಡಾ. ಮ.ನ. ಜವರಯ್ಯ | ಜಲ<br>ಪ್ರಕಾಶಕರು :<br>ಸಿದ್ಧಾರ್ಥ ಗ್ರಂಥಮಾಲೆ, ಕುವೆಂಪುನಗರ, ಮೈಸೂರು<br>ವರ್ಷ : ೧೯೯೯ |

೧೫. ಡಾ. ಸಿದ್ಧಲಿಂಗಯ್ಯ — ಏಕಲವ್ಯ
ಪ್ರಕಾಶಕರು :
ಅಂಕಿತ ಪುಸ್ತಕ, ಬಸನವಗುಡಿ, ಬೆಂಗಳೂರು
ವರ್ಷ : ೨೦೦೦

೧೬. ಡಾ. ಸಿದ್ಧಲಿಂಗಯ್ಯ — ಊರು - ಕೇರಿ
ಪ್ರಕಾಶಕರು :
ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು
ವರ್ಷ : ೨೦೦೬

೧೭. ಅರವಿಂದ ಮಾಲಗತ್ತಿ — ಗೌರ್ಮೆಂಟ್ ಬ್ರಾಹ್ಮಣ
ಪ್ರಕಾಶಕರು :
ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ
ವರ್ಷ : ೧೯೯೯

**ಪರಾಮರ್ಶನ ಗ್ರಂಥಗಳು :**

೧. ಅರವಿಂದ ಮಾಲಗತ್ತಿ — ದಲಿತ ಮಾರ್ಗ
ಪ್ರಕಾಶಕರು :
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು
ವರ್ಷ : ೨೦೦೨

೨. ಡಾ. ಪುರುಷೋತ್ತಮ ಬಿಳಿಮಲೆ — ಬಂಡಾಯ - ದಲಿತ ಸಾಹಿತ್ಯ
ಪ್ರಕಾಶಕರು :
ಕನ್ನಡ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಬೆಂಗಳೂರು
ವರ್ಷ : ೨೦೦೫

೩. ಡಾ. ವಿ. ಮುನಿವೆಂಕಟಪ್ಪ — ದಲಿತ ಸಾಹಿತ್ಯದರ್ಶನ
ಪ್ರಕಾಶಕರು :
ಕನ್ನಡ ಸಾಹಿತ್ಯ ಪರಿಷತ್ತು,
ಚಾಮರಾಜಪೇಟೆ, ಬೆಂಗಳೂರು
ವರ್ಷ : ೨೦೦೨

೪. ಎಲ್.ಎಸ್. ಶೇಷಗಿರಿರಾವ್ — ಹೊಸ ಗನ್ನಡ ಸಾಹಿತ್ಯ ಚರಿತ್ರೆ
ಪ್ರಕಾಶಕರು :
ಅಂಕಿತ ಪುಸ್ತಕ, ಬಸವನಗುಡಿ, ಬೆಂಗಳೂರು
ವರ್ಷ : ೨೦೦೬

೫. ಡಾ. ಎಸ್. ಚಂದ್ರಕಿರಣ್ ಅನುಸಂಧಾನ
ಪ್ರಕಾಶಕರು :
ತಾರಾ ಪ್ರಕಾಶನ, ಫೋರ್ಟ್‌ಮೊಹಲ್ಲಾ, ಮೈಸೂರು
ವರ್ಷ : ೨೦೦೬

೬. ಅರವಿಂದ ಮಾಲಗತ್ತಿ ಕಾದಂಬರಿಗಳ ವಿಮರ್ಶೆ
ಪ್ರಕಾಶಕರು :
ಪ್ರಸಾರಂಗ, ಮಾನಸ ಗಂಗೋತ್ರಿ, ಮೈಸೂರು
ವರ್ಷ : ೨೦೦೦

೭. ಟಿ.ವಿ. ವೆಂಕಟಾಚಲ ಶಾಸ್ತ್ರಿ ವಿಮರ್ಶೆಯ ಮಾರ್ಗ
ಪ್ರಕಾಶಕರು :
ಕನ್ನಡ ಅಧ್ಯಯನ ಸಂಸ್ಥೆ,
ಮಾನಸ ಗಂಗೋತ್ರಿ, ಮೈಸೂರು
ವರ್ಷ : ೧೯೯೨

೮. ಜಿ.ಎಸ್. ಅವಧಾನಿ ಸಾಹಿತ್ಯ ವಿಮರ್ಶೆ
ಪ್ರಕಾಶಕರು :
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
ವರ್ಷ : ೧೯೯೨

೯. ಅರವಿಂದ ಮಾಲಗತ್ತಿ ದಲಿತ ಸಾಹಿತ್ಯ ಪ್ರವೇಶಿಕೆ
ಪ್ರಕಾಶಕರು :
ಪೃಥ್ವಿ ಉದ್ಯಮ ಕೇಂದ್ರ, ಸರಸ್ವತಿಪುರಂ, ಮೈಸೂರು
ವರ್ಷ : ೧೯೯೭

೧೦. ಡಾ. ಕರಿಗೌಡ ಬೀಚನಹಳ್ಳಿ ಶತಮಾನದ ಸಣ್ಣ ಕಥೆಗಳ ಸಮೀಕ್ಷೆ
ಪ್ರಕಾಶಕರು :
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
ವರ್ಷ : ೨೦೦೩

೧೧. ಜಿ.ಆರ್. ತಿಪ್ಪೇಸ್ವಾಮಿ ಕನ್ನಡ ದಲಿತ ಸಾಹಿತ್ಯದ ನೆಲೆ
ಪ್ರಕಾಶಕರು :
ವಿಚಾರವಾದಿ ಪ್ರಕಾಶನ, ಸರಸ್ವತಿಪುರಂ, ಮೈಸೂರು
ವರ್ಷ : ೨೦೦೧

೧೨. ಡಾ. ಕೆ.ವಿ. ನಾರಾಯಣ — ತೊಡಕುಗಳು ಶೂದ್ರ
ಪ್ರಕಾಶಕರು :
ಅಕ್ಷರ ಪ್ರಕಾಶನ ಸಾಗರ
ವರ್ಷ : ೧೯೮೮

೧೩. ಜಿ.ಎಸ್. ಶಿವರುದ್ರಪ್ಪ — ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ
ಪ್ರಕಾಶಕರು :
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
ವರ್ಷ : ೧೯೮೬

೧೪. ಡಾ. ಅರವಿಂದ ಮಾಲಗತ್ತಿ — ದಲಿತ ಸಾಹಿತ್ಯ ಚಳುವಳಿಯ ತಾತ್ವಿಕ ಚಿಂತನೆ
ಪ್ರಕಾಶಕರು :
ಹೊಸ ದಿಕ್ಕು ಪ್ರಕಾಶನ, ಬೆಂಗಳೂರು
ವರ್ಷ : ೧೯೮೮

೧೫. ದೇವಯ್ಯ ಹರವೆ — ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು
ಪ್ರಕಾಶಕರು :
ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು
ವರ್ಷ : ೧೯೯೧

೧೬. ಬಿ. ಕೃಷ್ಣಪ್ಪ — ಚಿಂತನೆಗಳು ಮತ್ತು ಬರಹಗಳು
ಪ್ರಕಾಶಕರು :
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು
ವರ್ಷ : ೧೯೯೯

೧೭. ಬರಗೂರು ರಾಮಚಂದ್ರಪ್ಪ — ವಂಶವೃಕ್ಷ ಒಂದು ಅಧ್ಯಯನ
ಪ್ರಕಾಶಕರು :
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು
ವರ್ಷ : ೧೯೮೧

೧೮. ಬರಗೂರು ರಾಮಚಂದ್ರಪ್ಪ — ಸಾಹಿತ್ಯ ವಿಮರ್ಶೆ ೧೯೯೧
ಪ್ರಕಾಶಕರು :
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
ವರ್ಷ : ೧೯೯೧

